ಸಂ. 3-1

# ಅನಿಕೇತನ

ಅನುವಾದ ಸಾಹಿತ್ಯಕ್ಕೆ ಮೀಸಲಾದ ತ್ರೈಮಾಸಿಕ

ಈ ಸಂಚಿಕೆಯಲ್ಲಿ...

- ಪತ್ರ ಸಾಹಿತ್ಯ
- ಮರಾಠಿ ಕಾವ್ಯ
- ಮಹಿಳಾದೃಷ್ಟಿ
- ನೀಗ್ರೋ ಕವಯಿತ್ರಿಯರು
- ಪುರಸ್ಕೃತ ಸಾಹಿತ್ಯ

ಇತ್ಯಾದಿ



ಕರ್ನಾಟಕ ಸಾಹಿತ್ಯ ಅಕಾಡೆಮಿ

ಬೆಂಗಳೂರು

ಸಂ. 3–1
ಏಪ್ರಿಲ್ 1990–ಜೂನ್ 1990

# ಅನಿಕೇತನ

ಅನುವಾದ ಸಾಹಿತ್ಯಕ್ಕೆ ಮೀಸಲಾದ ಪತ್ರಿಕೆ



ಸಂಪಾದಕರು :

ಬಿ. ವೈ. ಲಲಿತಾಂಬ
ಡಾ. ಆರ್ವಿಯೆಸ್. ಸುಂದರಂ
ಡಾ. ಎಚ್. ಎಸ್. ವೆಂಕಟೇಶ ಮೂರ್ತಿ



ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು

ಅನಿಕೇತನ
ಕರ್ನಾಟಕ ಸಾಹಿತ್ಯ ಅಕಾಡೆಮಿಯ ತ್ರೈಮಾಸಿಕ
ಸಂ. 3-1, ಏಪ್ರಿಲ್ 1990-ಜೂನ್ 1990

ಪ್ರಧಾನ ಸಂಪಾದಕರು :
ಡಾ. ಜಿ. ಎಸ್. ಶಿವರುದ್ರಪ್ಪ
ಅಧ್ಯಕ್ಷರು
ಕರ್ನಾಟಕ ಸಾಹಿತ್ಯ ಅಕಾಡೆಮಿ

ನಿರ್ವಾಹಕರು :
ಡಿ. ಕೆ. ಶ್ಯಾಮಸುಂದರರಾವ್
ರಿಜಿಸ್ಟ್ರಾರ್
ಕರ್ನಾಟಕ ಸಾಹಿತ್ಯ ಅಕಾಡೆಮಿ
ನಂ. 14/7-ಅ, ನೃಪತುಂಗ ರಸ್ತೆ, ಬೆಂಗಳೂರು-560 002

ವಾರ್ಷಿಕ ಚಂದಾ : 10 ರೂ.
ಆಜೀವ ಚಂದಾ : 100 ರೂ.

ಮುದ್ರಕರು :
ರಶ್ಮಿ ಮುದ್ರಣ
ಸುಧಾಮನಗರ, ಬೆಂಗಳೂರು-560 027

## ಪರಿವಿಡಿ

**ಪತ್ರ ಸಾಹಿತ್ಯ :**



**ಭಾಷಾ ಸಾಹಿತ್ಯ :**

## ಪತ್ರ ಸಾಹಿತ್ಯ—ಒಂದು ಟಿಪ್ಪಣಿ

ಬಿ. ವೈ. ಲಲಿತಾಂಬ

ಪತ್ರಗಳು ಮನುಷ್ಯನ ಸಾಮಾಜಿಕ ಪ್ರವೃತ್ತಿಯ ಅಂಗವಾಗಿ ಬಹಳ ಹಿಂದಿನಿಂದಲೂ ಉಳಿದುಕೊಂಡು ಬಂದಿವೆ. ಮನುಷ್ಯರನ್ನು ಬೆಸೆಯುವಲ್ಲಿ ಅವು ಬಹು ಮುಖ್ಯ ಪಾತ್ರವಹಿಸಿವೆ. ಸಾವಿರಾರು ವರ್ಷಗಳ ಹಿಂದೆ ಮನುಷ್ಯ ಕಾಗದವನ್ನು ಕಂಡುಹಿಡಿಯುವುದಕ್ಕೂ ಮೊದಲು ಮಣ್ಣಿನ ತಟ್ಟೆಗಳ ಮೇಲೆ ಪತ್ರಗಳನ್ನು ಬರೆಯುತ್ತಿದ್ದನೆಂಬುದಕ್ಕೆ ನಮ್ಮಲ್ಲಿ ದಾಖಲೆಗಳಿವೆ. ರೋಂ ನಗರದ ಖ್ಯಾತ ಪತ್ರ ಲೇಖಕನಾಗಿದ್ದ ಸಿಸಿರೋ (ಕಿ.ಪೂ. 106-43) ಗಿಂತ ಸುಮಾರು 1000 ವರ್ಷಗಳು ಮುಂಚೆ ಪಶ್ಚಿಮ ಏಷ್ಯಾದಲ್ಲಿ ಆಳುತ್ತಿದ್ದ ಶಾಸಕರು ಈಜಿಪ್ಟಿನ ಫೆರೋನೊಂದಿಗೆ ಸ್ವಾರಸ್ಯಕರವಾದ ರೀತಿಯಲ್ಲಿ ಪತ್ರ-ವ್ಯವಹಾರ ನಡೆಸುತ್ತಿದ್ದರೆಂದು ತಿಳಿದುಬರುತ್ತದೆ.

ನಮ್ಮ ಪ್ರಾಚೀನ ಸಾಹಿತ್ಯದಲ್ಲೂ ಮನಸ್ಸಿನ ಕೋಮಲ ಭಾವನೆಗಳನ್ನು ಸೆರೆ ಹಿಡಿಯುವ ಪತ್ರಗಳಿಗೆ ಕೊರತೆ ಇಲ್ಲ. ಅದರಲ್ಲಿ ಪ್ರಮುಖವಾಗಿ ಪ್ರೇಮ ಪತ್ರಗಳನ್ನು ನಾವು ಮರೆಯುವಂತಿಲ್ಲ. ಶಕುಂತಳೆ ಕಮಲ ಪತ್ರದ ಮೇಲೆ ದುಶ್ಯಂತನಿಗೆ ಬರೆದ ಹಾಗೂ, ಕಾದಂಬರಿಯಲ್ಲಿ ಪುಂಡಲೀಕನು ಮಹಾಶ್ವೇತೆಗೆ ಬರೆದ ಪ್ರೇಮಪತ್ರ ಮುಂತಾದ್ವರಲ್ಲಿ ಶೃಂಗಾರ ಭಾವಗಳ ಅಭಿವ್ಯಕ್ತಿಯನ್ನು ಕಾಣುತ್ತೇವೆ.

'ಸಂದೇಶ' ಕಳುಹಿಸುವುದು ಪತ್ರಗಳ ಆಂತರಿಕ ಗುಣವಾಗಿರುವುದರಿಂದ 'ಮೇಘದೂತ' ಹಾಗೂ 'ಸಂದೇಶರಾಸಕ'ಗಳೂ ಪತ್ರದ ಕಾರ್ಯವನ್ನೇ ನಿರ್ವಹಿಸುತ್ತವೆ.

ಸುಮಾರು 15ನೆಯ ಶತಮಾನದ ವೇಳೆಗಾಗಲೇ ಗುಜರಾತಿ ಮತ್ತು ರಾಜಸ್ಥಾನಿ ಭಾಷೆಗಳಲ್ಲಿ ಪತ್ರಗಳಿಗೆ ಸಾಹಿತ್ಯದಲ್ಲಿ ಸ್ಥಾನ ನೀಡಲಾಗಿತ್ತು. ಹಾಗಿದ್ದರೂ ಆಧುನಿಕ ಯುಗದಲ್ಲಿ ಭಾರತೀಯ ಭಾಷೆಗಳಲ್ಲಿ ಪತ್ರಗಳು ಇತ್ತೀಚಿನ ದಿನಗಳಲ್ಲಿ ವಿಶೇಷವಾಗಿ

ಓದುಗರ ಗಮನ ಸೆಳೆದಿವೆ ಎನ್ನಬಹುದು. ಅಂತೆಯೇ ದೆಹಲಿಯಲ್ಲಿರುವ ನ್ಯಾಷನಲ್ ಆರ್‌ಕೀವ್ಸ್‌ನಲ್ಲಿ ಅನೇಕ ಬುದ್ಧಿ ಜೀವಿಗಳ ಸಾವಿರಾರು ಪತ್ರಗಳನ್ನು ಸಂಗ್ರಹಿಸಲಾಗಿದೆ. ಸಂಶೋಧನೆ ನಡೆಸುವ ವಿದ್ಯಾರ್ಥಿಗಳಿಗೆ ಈ ಪತ್ರಗಳು ಬಹಳ ಮುಖ್ಯವಾದ ಸಾಮಗ್ರಿ ಎನಿಸಿವೆ. ವರಕವಿ ರವೀಂದ್ರರು, ಶರತ್‌ಚಂದ್ರರು, ರೋಮಾಂರೋಲಾ, ಸಿ.ಎಫ್. ಆಂಡ್ರೂಸ್, ರೈಟ್ ಆನರಬಲ್ ಶ್ರೀನಿವಾಸಶಾಸ್ತ್ರಿ, ಜೊತೆಗೆ ನೂರಾರು ಮಂದಿ ಇತರ ಸಾಹಿತಿಗಳ ಪತ್ರಗಳೂ ಇಲ್ಲಿ ದಾಖಲಾಗಿದ್ದು 'ಪತ್ರ'ಗಳ ಅಧ್ಯಯನಕ್ಕೆ ಚಾಲನೆ ನೀಡಿವೆ,

ಇದಲ್ಲದೆ ಇಂದು ಪತ್ರಕವನಗಳು, ಪತ್ರಶೈಲಿಯಲ್ಲಿ ಸಾಹಿತ್ಯ ವಿಮರ್ಶೆ ಚಿಂತನೆ, ಕತೆ-ಕಾದಂಬರಿಗಳು, ಪ್ರವಾಸ ಸಾಹಿತ್ಯವೂ ಪ್ರಕಟವಾಗುತ್ತಲಿವೆ. ಇದರಿಂದಾಗಿ ಪತ್ರಗಳು ಓದುಗ-ಲೇಖಕನ ನಡುವೆ ಆತ್ಮೀಯತೆಯ ಸಂಬಂಧ ಏರ್ಪಡಿಸುವಲ್ಲಿ ಫಲಕಾರಿಯಾಗಿವೆ.

'ಪತ್ರ'ಗಳ ಕೆಲವು ಸ್ವಾರಸ್ಯಕರ ಮಾದರಿಗಳನ್ನು 'ಪತ್ರ ಸಾಹಿತ್ಯ' ವಿಭಾಗದಲ್ಲಿ ನೀಡಲಾಗಿದೆ.

---

## ಶಕುಂತಳೆ ದುಶ್ಯಂತನಿಗೆ ಬರೆದ ಪತ್ರ

ನಿನ್ನ ಮನವನು ನಾನು ತಿಳಿಯೆನು ಆದರೆಲೆ ನಿಷ್ಠುರನೆ ಮನ್ಮಥನು
ಪಗಲುಮಿರುಳುಂ ಭರದಿನುರಿಪನು ನಿನ್ನನೆಳಸಿರುವೆನ್ನ ದೇಹವನು.

(ಅಭಿಜ್ಞಾನ ಶಾಕುಂತಲಮ್-ಕಾಲಿದಾಸ)
ಅನು : ಎಸ್.ವಿ. ಪರಮೇಶ್ವರ ಭಟ್ಟ

## ಸಂಜೀವ್ ದೇವ್–ಹಕ್ಸಲಿ ಅವರಿಗೆ :

ಅನು (ಇಂಗ್ಲಿಷ್) : ಜಿ.ಎಸ್. ಭಟ್ಟ

ನನ್ನ ಪ್ರೀತಿಯ ಆಲ್ಡಸ್ ಹಕ್ಸಲಿ ಅವರೆ,

ಪ್ರೀತಿಯನ್ನು ಹೊಮ್ಮಿಸುವ ನಿಮ್ಮ 11ನೆಯ ದಿನಾಂಕದ ಪತ್ರ ತಲುಪಿ ಸಂತೋಷವಾಗಿದೆ. ಧನ್ಯವಾದಗಳು. ನಿಮ್ಮಂಥ ಧೀಮಂತ ಸೃಜನಶೀಲರಿಗೆ ಬರೆಯುವುದಾಗಲಿ ನಿಮ್ಮಿಂದ ಪತ್ರ ಪಡೆಯುವುದಾಗಲಿ ಯಾವಾಗಲೂ ಸುಗಂಧಪುಷ್ಪವನ್ನು ಆಘ್ರಾಣಿಸಿದಷ್ಟೆ ಆಹ್ಲಾದಕರ-ಅದೊಂದು ಪರಿಪೂರ್ಣ ಸೌಂದರ್ಯದರ್ಶನ. ಕಾವ್ಯಾತ್ಮಕ ಅಂತರ್ಬೋಧ.

ನಾವೆಲ್ಲ ಮಾನವರೆಂಬುದು ನಿಸ್ಸಂದೇಹ–ನಾನಾ ರಂಗುಗಳಿಂದ, ಛಾಯೆಗಳಿಂದ ಕೂಡಿದ ಮಾನವರು. ಭಿನ್ನತೆಗಳು ಮಾನವತೆಯನ್ನು ಒಡೆಯುವುದೆಂದು ಆಗಾಗ ಹೇಳುವುದುಂಟು. ಆದರೆ ಭಿನ್ನತೆಗಳು ಮಾನವತೆಯನ್ನು ಒಂದುಗೂಡಿಸುವುದೆಂದು ನನಗೆ ತೋರುತ್ತದೆ. ನಿಜವಾದ ಅರ್ಥದಲ್ಲಿ ವ್ಯಕ್ತಿಗಳಿಗೆ ಪರಸ್ಪರ ವ್ಯತ್ಯಾಸಗಳ ನಿಕಟ ಪರಿಚಯ ಇರಬೇಕಾದ್ದು ಅಗತ್ಯ. ಪರಸ್ಪರ ವ್ಯತ್ಯಾಸಗಳ ಅರಿವಿನಿಂದ ಏಕತೆಯ ಹಾದಿ ಸುಗಮವಾಗುತ್ತದೆ. ಆದರೆ ಇದರ ಅಜ್ಞಾನದಿಂದ ಭಿನ್ನತೆ ಉಂಟಾಗುತ್ತದೆ. ಮಾನವತೆ ಒಂದು ಎಂದು ನಾವು ಹೇಳುವಾಗ ಅದರ ಅರ್ಥ ಇದು ; ಮಾನವತೆಯ ಏಕತೆ ಇರುವುದು ಅದರ ವಿವಿಧತೆಯಲ್ಲಿ. ಅಂದರೆ ತೋರಿಕೆಯ ವಿವಿಧತೆಯಲ್ಲಿ, ಚಿಂತನದ ವಿವಿಧತೆಯಲ್ಲಿ, ಮನೋಧರ್ಮದ ವಿವಿಧತೆಯಲ್ಲಿ, ಭಾವನೆಯ ವಿವಿಧತೆಯಲ್ಲಿ ; ಜೀವನದ ವ್ಯವಸ್ಥೆಯ

ವಿವಿಧತೆಯಲ್ಲಿ. ನಾವೆಲ್ಲ ವಿಭಿನ್ನರಾಗಿರುವುದರಿಂದಲೇ ಒಂದಾಗಿದ್ದೇವೆ. ವಿಭಿನ್ನತೆ ಎಂದರೆ ಅವ್ಯವಸ್ಥೆ. ಏಕತೆ ಎಂದರೆ ಸುವ್ಯವಸ್ಥೆ. ಅವ್ಯವಸ್ಥೆಯಿಂದ ಸುವ್ಯವಸ್ಥೆ ವ್ಯೆದಾಳುತ್ತದೆ.

ಈಗ ದಕ್ಷಿಣದ ನಮ್ಮ ಭಾಗದಲ್ಲಿ ಹವಾಗುಣ ಅತ್ಯಂತ ಆಹ್ಲಾದಕರ. ಶರತ್ ಕಾಲ ಹೋಗಿ ಚಳಿಗಾಲ ಬರುತ್ತಿದೆ. ಉರಿಯುವ ಧಗೆ, ಮಳೆ ಮತ್ತು ಚಳಿ ಈಗ ನಮ್ಮನ್ನು ಬಾಧಿಸುವುದಿಲ್ಲ. ಪಾರದರ್ಶಕ ನಿರ್ಮಲ ಆಕಾಶ ಮತ್ತು ಹೊಂಬಿಸಿಲು ಅಲ್ಲದೆ ನದಿ ಕಾಲುವೆ ಕೊಳಗಳ ಸ್ಫಟಿಕ ಶುಭ್ರ ನೀರು, ಜೊತೆಗೆ ಮೂಡಣದಿಂದ ಬೀಸುವ ತಂಪನೆಯ ಗಾಳಿ-ಇದು ಸ್ವತಃ ಕೇವಲ ಅಹ್ಲಾದಕರ. ಜೊಂಡು ಲಾಳಗಳಂಥ ಜಲಸಸ್ಯಗಳು ಹರಿಯುವ ತೊರೆಯಂಚಿನಲ್ಲಿ ತಲೆದೂಗುತ್ತ ಸೌಂದರ್ಯಾನುಭವಿಗಳಿಗೆ ಕಾವ್ಯಾನಂದವನ್ನು ನೀಡುತ್ತವೆ. ಶರತ್‌ಕಾಲದ ನೀಲಾಕಾಶದ ಕೆಳಗೆ ಕಂಗೊಳಿಸುವ ಬೆಳ್ಳಗಿನ ಜೊಂಡಿನ ಹೂವಿನ ರಾಶಿಯಂತೂ ವಾತಾವರಣದಲ್ಲಿ ಇಂದ್ರಿಯಾತೀತ ಸೌಂದರ್ಯವನ್ನೇ ತುಂಬಿದೆ.

ನಿಮಗೆ ನಾನು ಕಳುಹಿಸಿದ ಮರಳುಗಾಡಿನ ನನ್ನ ಕಿರು ಜಲವರ್ಣದ ಚಿತ್ರ ವನ್ನು ನೀವು ಮೆಚ್ಚಿಕೊಂಡಿದ್ದೀರಿ, ಧನ್ಯವಾದಗಳು. ಮರಳುಗಾಡಿನ ಭೂದೃಶ್ಯವನ್ನು ಕುಂಚಿಸುವುದು ಕಷ್ಟ. ನಿಮಗಾಗಿ ನಾನು ಇದೀಗ ರಚಿಸಿರುವ ಕೆಲವು ಕಿರು ಚಿತ್ರ ಗಳನ್ನು ಇದರೊಂದಿಗೆ ಕಳುಹಿಸುತ್ತಿದ್ದೇನೆ. ನನ್ನ ಬದುಕಿನ ಸೃಜನಾತ್ಮಕ ಮುಖದ ಮೂಲಕ-ಸಮಾಂತರ ರೇಖೆಗಳಂತೆ, ಸಾಹಿತ್ಯ ಮತ್ತು ಚಿತ್ರಕಲೆಯ ಯಮಳ ನದಿ ಗಳು ಹರಿಯುತ್ತವೆ. ನಾನೊಬ್ಬ 'ವರ್ಣಕಾರ'. ಸಂಸ್ಕೃತದಲ್ಲಿ ವರ್ಣ ಎಂದರೆ ಬಣ್ಣ ಮತ್ತು ಅಕ್ಷರ ಎರಡೂ ಆಗುತ್ತದೆ. ಆದ್ದರಿಂದ ನಾನು ಚಿತ್ರಕಾರ ಮತ್ತು ಸಾಹಿತಿ ಎರಡೂ ಎಂದಾಗುತ್ತದೆ.

ಸ್ವತಂತ್ರವಾಗಿರುವುದೆಂದರೆ ಸುಖಿಯಾಗಿರುವುದು. ಸ್ವಾತಂತ್ರ್ಯಕ್ಕಿಂತ ಹೆಚ್ಚು ಸುಖಕರವಾದದ್ದು ಇಲ್ಲ. ದಾಸ್ಯಕ್ಕಿಂತ ಹೆಚ್ಚು ಸಂಕಟವಾದ್ದು ಮತ್ತೊಂದಿಲ್ಲ. ಆದಾಗ್ಯೂ ಸ್ವಾತಂತ್ರ್ಯಕ್ಕೂ ಅದರದೇ ಆದ ಇತಿಮಿತಿಗಳಿವೆ. ಈ ಇತಿಮಿತಿಗಳ ಹೊರಗೆ ಸ್ವಾತಂತ್ರ್ಯಕ್ಕೆ ದಾಸ್ಯದ ನೀಲ ಸೆರಳು ಶೃಂಖಲೆಗಳಾಗಿವೆ. ಅಲ್ಲವೆ ಸ್ವಾತಂತ್ರ್ಯ ಎಂಬುದು ನಿರುಪಾಧಿತವಾದ್ದು, ಅದು ಸಾಪೇಕ್ಷವಾದ್ದು. ಏಕೆಂದರೆ ಒಬ್ಬನ ಸ್ವಾತಂತ್ರ್ಯದಲ್ಲಿ ಇನ್ನೊಬ್ಬನ ದಾಸ್ಯವಿದೆ. ಅಂತೆಯೇ ಒಬ್ಬನ ದಾಸ್ಯದಲ್ಲಿ ಇನ್ನೊಬ್ಬನ ಸ್ವಾತಂತ್ರ್ಯವಿದೆ. ಸ್ವಾತಂತ್ರ್ಯದ ಸಾರ್ವತ್ರಿಕ ವ್ಯಾಖ್ಯೆಯೊಂದಿದೆ : ದೈಹಿಕ ಮತ್ತು ಮಾನಸಿಕ ಸಂಕಟವೆಂದರೆ ರಾಜಕೀಯ, ಆರ್ಥಿಕ, ಸಾಮಾಜಿಕ, ಕೌಟುಂಬಿಕ ಮತ್ತು ವೈಯಕ್ತಿಕ ಸಂಕಟವನ್ನು ಒಳಗೊಂಡ ಪ್ರತಿಯೊಂದು ಬಗೆಯ ಸಂಕಟವೂ ಆಗು ತ್ತದೆ. ಸಂಕಟವೆಂದರೆ ದಾಸ್ಯ. ಆದ್ದರಿಂದ ಸ್ವಾತಂತ್ರ್ಯವೆಂದರೆ ಎಲ್ಲ ಸಂಕಟದಿಂದ ವಿಮೋಚನೆ.

ಸದ್ಯಕ್ಕೆ ಇಷ್ಟು ಸಾಕು. ನೀವೆಲ್ಲಿ ಉತ್ಸಾಹದಿಂದ ಇದ್ದೀರೆಂದು ಆಶಿಸುತ್ತೇನೆ. ದಯವಿಟ್ಟು ನನ್ನ ಹಾರ್ದಿಕ ಭಾವನೆಗಳನ್ನು ಶ್ರೀಮತಿ ಹಕ್ಸಲಿ ಅವರಿಗೆ ತಿಳಿಸಿ.

ಹೀಗೆ ಹಾರ್ದಿಕವಾಗಿ
ಸಂಜೀವ್ ದೇವ್

---

## ಪುಂಡರೀಕ ಮಹಾಶ್ವೇತೆಗೆ ಬರೆದ ಪತ್ರ

ಬಿಸದಂತೆ ಬೆಳ್ಳಗಿಹ ಜಪದ ಮುತ್ತಿನ ಮಾಲೆ
ಆಸೆ ತೋರಿಸಿ ದೂರ ದೂರಕೆಳೆದಾಗ
ಹಂಸದೊಲು ಮಾನಸದೊಳಡಗಿದ್ದ ನನ್ನದೀ
ಕಾಮನೆಯು ನಿನ್ನ ಜತೆ ಬೆಂಬತ್ತಿತು.

(ಕಾದಂಬರಿ–ಬಾಣ)
ಅನು : ಬನ್ನಂಜೆ ಗೋವಿಂದಾಚಾರ್ಯ

# ಸಂಜೀವದೇವ್–ಬುಚ್ಚಿಬಾಬು ಅವರಿಗೆ

ಅನು (ತೆಲುಗು) : ಎ. ಎಂ. ದೇವಿ

ಮಿತ್ರರಾದ ಬುಚ್ಚಿಬಾಬು ಅವರೇ,

ನೀವಿಬ್ಬರು ತೋರುವ ಆದರ ನಿಜವಾಗಿಯೂ ನನ್ನನ್ನು ಪ್ರತಿಸಾರಿಯೂ ನಿಮ್ಮ ಮನೆಯಲ್ಲಿ ಇರುವಂತೆ ಮಾಡುತ್ತದೆ. ನಿನ್ನೆ ಕೂಡ ನಿಮ್ಮ ಜೊತೆಯಲ್ಲಿ ಇದ್ದುಬಿಡಬೇಕೆಂದು ಇಷ್ಟವಾಯಿತು.

ಆದರೆ ಪ್ರತಿಸಾರಿಯೂ ಇಷ್ಟಕ್ಕೇ ಬದ್ಧವಾದರೆ ಅರಿಷ್ಟಗಳು ತಪ್ಪವು. ಇಷ್ಟವಾದ ಕೆಲಸವನ್ನು ಮಾತ್ರ ಮಾಡಲು ಕಲಿತರೆ ಮನುಷ್ಯನ ಶಕ್ತಿ ಮೊಟಕಾಗುತ್ತದೆ. ಆಗಾಗ ಇಷ್ಟವಿಲ್ಲದ ಕೆಲಸಗಳನ್ನು ಕೂಡ ಮಾಡಬಲ್ಲವನಾಗಿದ್ದರೇನೇ ಮಾನವನಲ್ಲಿ ಸಾಹಸ ಜ್ವಾಲೆ ಬೆಳಗುತ್ತಿರುತ್ತದೆ.

ಆದ್ದರಿಂದಲೇ, ನಿನ್ನೆ ನಿಮ್ಮ ಮನೆಯಲ್ಲಿ ಇದ್ದು ಹೋಗಬೇಕೆಂಬ ಇಷ್ಟಕ್ಕೆ ವಿರುದ್ಧವಾಗಿ ನಿಮ್ಮಲ್ಲಿ ಇರದೆ ಮನೆಗೆ ಬಂದುಬಿಟ್ಟೆ.

ಸಾಯಂಕಾಲ ಏಳು ಗಂಟೆಯೊಳಗೆ ನಮ್ಮ ಊರಿಗೆ ಬರಬೇಕಿದ್ದ ರೈಲು ಅರ್ಧ ರಾತ್ರಿ ಹನ್ನೆರಡು ಗಂಟೆಗೆ ಬಂತು.

ಪ್ರಯಾಣ ತಡವಾದರೆ ಸಂಕಟವೇನೋ ಇದ್ದದ್ದೇ. ಒಂದೊಂದು ಸಲ ಆದರಲ್ಲೇ ಆನಂದವೂ ಸಿಗುತ್ತದೆ. ಗಮ್ಯಸ್ಥಾನ ಪ್ರಿಯವಾದುದಾದರೆ ಪ್ರಯಾಣದ ತಡವನ್ನು ಸಹಿಸಲಾಗದು. ಗಮ್ಯಸ್ಥಾನ ಅಪ್ರಿಯವಾದುದಾದರೆ ತಡವಾದಷ್ಟೂ ಮನಸ್ಸಿಗೆ ಹಾಯಾಗಿರುತ್ತದೆ.

ನಿನ್ನೆ ನಿಮ್ಮ ಅಸಂಪೂರ್ಣ ತೈಲಚಿತ್ರ ನೋಡಿ ನನ್ನಲ್ಲೇ ಮೌನವಾಗಿ ಸಂತೋಷಪಟ್ಟೆ. ನಿಂದೆಯನ್ನು ಸಹಿಸುವುದು ಎಷ್ಟು ಕಷ್ಟವೋ ಕೆಲವರಿಗೆ ಸ್ತುತಿಯನ್ನು ಸಹಿಸುವುದು ಕೂಡಾ ಅಷ್ಟೇ ಕಷ್ಟವಾಗಿರುತ್ತದೆ ; ಹೆಚ್ಚು ಕಷ್ಟ ಆಗದಿದ್ದರೂ !

ಅದಕ್ಕೇ ನಿಮ್ಮ ಅಸಂಪೂರ್ಣ ಚಿತ್ರ ನೋಡಿ ನಿಮ್ಮ ಮುಂದೆ ನಾನೇನೂ ಹೇಳಲಿಲ್ಲ. ಅದನ್ನು ಹೊಗಳಿದರೆ ನಿಮಗೆ ನೋವಾಗುತ್ತದಲ್ಲವೇ, ನಿಂದಿಸಿದರೆ ಅದಕ್ಕಿಂತ ಕಡಿಮೆ ನೋವಾಗುತ್ತಾ ?

ನಾವಿಬ್ಬರೂ ಪ್ರಧಾನವಾಗಿ ಪ್ರಕೃತಿ ಚಿತ್ರಗಳನ್ನೇ ಬಿಡಿಸುತ್ತೇವೆ. ನೀವು ಪ್ರಧಾನವಾಗಿ ತೈಲವರ್ಣಗಳಲ್ಲಿ ಚಿತ್ರಿಸಿದರೆ, ನಾನು ಪ್ರಧಾನವಾಗಿ ಜಲವರ್ಣಗಳಲ್ಲಿ. ನಿಮ್ಮದು ಮಹಾಕಾವ್ಯ, ನನ್ನದು ಖಂಡಕಾವ್ಯ. ನೀವು ಉಷ್ಣವರ್ಣಗಳನ್ನು ಹೆಚ್ಚಾಗಿ ಬಳಸುತ್ತೀರಿ, ನಾನು ಶೀತಲವರ್ಣಗಳನ್ನು. ನಿಮ್ಮ ಕಲಾಸೃಷ್ಟಿಗೆ ಪ್ರಧಾನ ಪ್ರೇರಣೆ ಪಾಶ್ಚಾತ್ಯ ಕಲೆ, ನನಗೆ ದೂರಪ್ರಾಚ್ಯ ಕಲೆ. ಅಂದರೆ ಭಾರತೀಯ ಕಲೆ ನಮ್ಮಿಬ್ಬರಿಗೂ ಪ್ರೇರಣೆ ನೀಡುವಲ್ಲಿ ಅಸಫಲವಾಗಿದೆ. ಹೌದು ಮತ್ತೆ, ಭಾರತೀಯ ಚಿತ್ರಕಲೆಯಲ್ಲೂ ಪ್ರಕೃತಿ ದೃಶ್ಯಚಿತ್ರಣ ತುಂಬಾ ವಿರಳ.

ವರ್ಡ್ಸ್‌ವರ್ತ್ ಹೇಳುತ್ತಾನೆ : “If pure the stream what matters from whence it bursts ?” ಎಂದು. ಕಲಾಸೃಷ್ಟಿಯಲ್ಲಿ ದೇಶಭೇದವನ್ನು ಮಾಡುವುದು ಅಷ್ಟು ಒಳ್ಳೆಯದಲ್ಲ. ಯಾವುದಾದರೂ ಸರಿ, ಯಾವುದೋ ಒಂದು ದೇಶದ ಸೊತ್ತು ಎಂದು ನಿರ್ಣಯಿಸುವ ಅಗತ್ಯವಿಲ್ಲ. ಒಂದು ದೇಶದ ಸಂಪ್ರದಾಯ ಅಂದುಕೊಂಡದ್ದು ಅದರ ಪ್ರಾಚೀನತೆಗೆ ಹೋಗಿ ಪರೀಕ್ಷಿಸಿ ನೋಡಿದರೆ ಅದು ಮತ್ತೊಂದು ದೇಶಕ್ಕೆ ಸೇರಿದ್ದೆಂದು ಕಂಡುಬರುತ್ತದೆ. ಅದು ಮತ್ತೊಂದು ದೇಶದ್ದಾಗಿರುವುದು ಎಷ್ಟರವರೆಗೆ ? ಇನ್ನೂ ದೂರಕ್ಕೆ ಹೋಗಿ ನೋಡಿದರೆ ಅದು ಇನ್ನೊಂದು ದೇಶದ್ದೆಂದು ತಿಳಿದುಬರುತ್ತದೆ. ಹೀಗಾಗಿ ಕಲೆಗಳಲ್ಲಿ ಮಾತ್ರವಲ್ಲ, ಜೀವನದಲ್ಲೂ ರಾಷ್ಟ್ರೀಯ ಶುದ್ಧತೆಯನ್ನು ನಿಲ್ಲಿಸುವುದು ಕಷ್ಟಸಾಧ್ಯ. ಇಂಗ್ಲಿಷಿನಲ್ಲಿ flux ಎನ್ನುತ್ತಾರೆ ನೋಡಿ, ರಾಷ್ಟ್ರೀಯ ಶುದ್ಧತೆ ಅಂಥದು. ಅದಕ್ಕೆ ರಾಷ್ಟ್ರೀಯತೆ ತಾತ್ಕಾಲಿಕ, ಅಂತಾರಾಷ್ಟ್ರೀಯತೆ ಚಿರಕಾಲಿಕ, ಅದಕ್ಕೆ ನಾವು ಸಾರಬೇಕು–ಮಾನವ ಕುಲಕ್ಕೆ ಕಲ್ಯಾಣಾತ್ಮವಾದುದು, rationalism ಹೊರತು nationalism ಅಲ್ಲ ಎಂದು.

ನಿಮ್ಮ ಹೊಸ ಕಾದಂಬರಿ, ಕಿರು ನಾಟಕಗಳು ಬೇಗನೆ ಪ್ರಕಟವಾಗಿ ನಮ್ಮ ಕೈಸೇರುತ್ತವೆಂದು ಆಶಿಸುತ್ತೇನೆ. ನನ್ನ ಜೀವನದಲ್ಲಿ ಕಲ್ಪನಾಸಾಹಿತ್ಯ ಸೃಷ್ಟಿಸಲು ನನ್ನಿಂದ ಸಾಧ್ಯವಿಲ್ಲ. ವಿಚಾರ ಸಾಹಿತ್ಯ ಹೆಚ್ಚಾಗಿ ಬರೆದಿದ್ದೇನೆ. ಈ ಕೆಲಸದಲ್ಲಿ ಶುಷ್ಕತೆಯಿಂದ ಹೊರಬೀಳಲು ಯಾವಾಗಲಾದರೂ ಕವನ ಬರೆಯುತ್ತೇನೆ. ಈ ಕವನಗಳು ಕೂಡಾ ನೀರಸವಾದುವೇ ಹೊರತು ಅಷ್ಟೇನೂ ರಸಮಯವಾದವಲ್ಲ. ತೆಲುಗಿನಲ್ಲಿ ಹೆಚ್ಚಿಗೆ ಕವನಗಳನ್ನು ಬರೆದಿಲ್ಲ. ತೆಲುಗಿನಲ್ಲಿ ಬರೆದರೆ ಅವುಗಳ ಬಲಹೀನತೆ ಹೊರಬೀಳುತ್ತದೆಂದು ಇಂಗ್ಲಿಷಿನಲ್ಲೇ ಹೆಚ್ಚು ಬರೆದಿದ್ದೇನೆ.

ಕವನ ಬರೆಯಲು ಮಾತುಗಳು ದೊರಕದಿದ್ದಾಗ ಘಟ್ಟನೆ ಬಣ್ಣಗಳ ಮೊರೆಹೊಕ್ಕು ಆ ಬಣ್ಣಗಳ ಅಭಿವ್ಯಕ್ತಿ ಮಾಡಲಾಗುತ್ತದೆ. ಆ ಬಣ್ಣಗಳಲ್ಲೂ ಹೊಂದಾಣಿಕೆ ಇಲ್ಲದಿದ್ದರೆ

ಅರೆಗಣ್ಣಿನಲ್ಲಿ ನೀಲಾಕಾಶದಲ್ಲಿ ತೇಲಿಹೋಗುವ ಬೆಳ್ಮುಗಿಲುಗಳನ್ನು, ಆ ಮುಗಿಲಬಳಿ ಹಾರಾಡುವ ಹದ್ದುಗಳನ್ನು ನೋಡುತ್ತಾ "ದಿವಾಸ್ವಪ್ನ" ಕಾಣುತ್ತೇನೆ. "ದಿವಾಸ್ವಪ್ನ" ಗಳೆನ್ನುವ ಮಾತಿಗಿಂತ 'ಹಗಲುಗನಸು' ಎನ್ನುವುದೇ ಹೆಚ್ಚು ಆಕರ್ಷಕವಾಗಿ ಇರುತ್ತದೆ ಎಂದುಕೊಳ್ಳುತ್ತೇನೆ.

ನನ್ನ ಕವನ ವಸ್ತುಗಳು ಕೂಡ ಹೆಚ್ಚಾಗಿ ಈ ಪಾರ್ಥಿವ ಜಗತ್ತಿಗೆ ಸೇರಿದ ವಾಗಿರದೆ ಯಾವುದೋ ರೆಕ್ಕೆಗಳನ್ನು ಕಟ್ಟಿಕೊಂಡು ಕಾಮನಬಿಲ್ಲಿನ ಲೋಕದಿಂದಾಚೆ ಹಾರಾಡುವಂತಿರುತ್ತವೆ. ಹಾಗೆ ರಚಿಸುವುದು ನನಗೆ ಪೂರ್ತಿ ಇಷ್ಟ ಇಲ್ಲದಿದ್ದರೂ ಹಾಗೆ ಬರೆಯದೆ ಇರಲಾಗುವುದಿಲ್ಲ. ಇವೆಲ್ಲವನ್ನು ಮುಕ್ತಛಂದಸ್ಸಿನಲ್ಲಿಯೇ (verse libre or free verse) ರಚಿಸಿದ್ದೇನೆ. ಕೆಲವನ್ನು ನಿಮಗೆ ಇಲ್ಲಿ ಹೇಳಬಯಸುತ್ತೇನೆ :

''Emotion fades/Intellects wanes/Intuition wakes/Space spreads/Into infinity/Time melts/Into eternity/In the waning moonlight/The mountain casts its shadow/In the vale of mystery/That reverberates with the echo/The echo of the song/ That fades away/Into silence within.''

ಹೀಗೆ ಯಾವುವೋ ಅಸ್ಫುಟ ಕವಿತೆಗಳು. ಅವು ಸ್ಫುಟವಾಗಿ ಇದ್ದರೆ ಕವಿತೆಗಳೇ ಅಗುವುದಿಲ್ಲವೇನೋ !

ಕಾದಂಬರಿಗಳು, ನಾಟಕಗಳು, ಸಣ್ಣಕತೆಗಳನ್ನು ಬರೆಯುವಲ್ಲಿಯೂ ನನಗೆ ಆಸಕ್ತಿ ಸಹಜವಾಗಿ ಇಲ್ಲದಿದ್ದರೂ ಅವನ್ನು ಓದುವಲ್ಲಿ ಮಾತ್ರ ಇದೆ. ಇತ್ತೀಚೆಗೆ ಬೆಂಗಾಲೀ ಮಾಸಪತ್ರಿಕೆಯೊಂದರಲ್ಲಿ ಒಂದು ಸಣ್ಣಕತೆ ಓದಿದೆ. ಅದರಲ್ಲಿಯ ಕಡೆಯ ಮಾತುಗಳು ತುಂಬಾ ಸೊಗಸಾಗಿವೆ.

"ಜೀವನದಲ್ಲಿ ಏನ್ನು ಮಾಡಲು ಸಾಧ್ಯ" ಎಂದೆನಿಸುತ್ತದೆ—ಒಂದೊಂದು ಸಾರಿ. "ಎಷ್ಟಾದರೂ ಮಾಡಬಹುದು" ಅನಿಸುತ್ತದೆ ಮತ್ತೊಂದು ಸಾರಿ. "ಎಷ್ಟೋ ಮಾಡಲಾಗದು, ಕೆಲವನ್ನು ಮಾತ್ರ ಮಾಡಬಹುದು" ಎನಿಸುತ್ತದೆ ಇನ್ನೊಮ್ಮೆ. "ಏನನ್ನಾದರೂ ಮಾಡುವುದು ಏತಕ್ಕೆ" ಎಂದೆನಿಸುತ್ತದೆ ಮತ್ತೊಮ್ಮೆ. "ಏನಾದರೂ ಮಾಡದೆ ಇರುವುದು ಮಾತ್ರ ಏಕೆ" ಎಂದು ಮಗುದೊಮ್ಮೆ ಅನಿಸಿ ಯಾವುದೋ ಒಂದನ್ನು ಮಾಡುತ್ತಾ ಕೂರುತ್ತೇವೆ.

ಈ ಉರಿಬಿಸಿಲಿನಲ್ಲಿ ನೀವೆಲ್ಲ ತಣ್ಣಗೆ ಇರುವಿರೆಂದು ಆಶಿಸುತ್ತೇನೆ. ನೀವಿಬ್ಬರು ಯಾವಾಗ ಬರುವಿರಿ ಈ ಕಡೆಗೆ ?

ನಿಮ್ಮವ,
ಸಂಜೀವದೇವ್

# ರಾಳ್ಳಪಲ್ಲಿ ಅವರು ನಾಗಳ್ಳ ಗುರುಪ್ರಸಾದ್ ಅವರಿಗೆ

ಅನು (ತೆಲುಗು) : ಸುಜ್ಞಾನಮೂರ್ತಿ

ಶ್ರೀ ನಾಗಳ್ಳ ಗುರುಪ್ರಸಾದರಾವ್‌ರವರಿಗೆ ವಿಜ್ಞಾಪನೆಗಳು.

ನಿಮ್ಮ ಪತ್ರ ಸೇರಿದೆ. ನಿಮ್ಮ ಪರಿಚಯವನ್ನು ಇಷ್ಟು ವಿವರವಾಗಿ ನೆನಪಿಗೆ ತಂದುದಕ್ಕೆ ಕೃತಜ್ಞನಾಗಿದ್ದೇನೆ. ಕೆಲವು ವರ್ಷಗಳಿಂದ ನನಗೆ ಸ್ಮೃತಿದೌರ್ಬಲ್ಯ ಹಿಡಿದುಕೊಂಡು ಬೆಳೆಯುತ್ತಿದೆ. ಅದು ವಯಸ್ಸಿನ ದೋಷ. ಆದರೆ ನನಗಿಂತಲೂ ವೃದ್ಧರನೇಕರಿಗೆ ಒಳ್ಳೆಯ ಜ್ಞಾಪಕಶಕ್ತಿ ಇದೆ. ನನಗೆ ದೋಷವು ಯಾವ ನನ್ನ ದೋಷದ ಫಲವೋ ತಿಳಿಯದು. ಈ ಮರವೆಗೆ ಅಹಂಕಾರ ಕಾರಣವೆಂಬ ಅಪವಾದನೆಯನ್ನು ಕೂಡ ಅನುಭವಿಸುತ್ತಿದ್ದೇನೆ. ಆದರೆ ಅದು ನಿಜವಲ್ಲವೆಂದೂ ಅದರ ಕಾರಣವೇನೋ ತಿಳಿಯದೆಂದೂ ನನಗೆ ಗೊತ್ತು. ನನ್ನನ್ನು ಬಲ್ಲ ನನ್ನ ಮಿತ್ರರು ಅದನ್ನು ಮನ್ನಿಸುವರು. ಅಂಥವರಲ್ಲಿ ನೀವೂ ಒಬ್ಬರಾಗಿರುವುದರಿಂದ ನನ್ನ ಧನ್ಯವಾದಗಳು.

ನನ್ನ ಅಲ್ಪ ಸ್ವಲ್ಪ ವಿಮರ್ಶೆಗಳನ್ನು ಕುರಿತು ನೀವು ದೊಡ್ಡದಾಗಿ ಭಾವಿಸಿದ್ದೀರಿ. ಕೃತಜ್ಞನಾಗಿದ್ದೇನೆ. ನನ್ನ ದೃಷ್ಟಿಯಲ್ಲಿ ನನ್ನ ವ್ಯವಹಾರದಲ್ಲಿ ವಿಮರ್ಶೆ ಒಂದು ಶಾಸ್ತ್ರವಲ್ಲ. ಆ ದೃಷ್ಟಿಯಲ್ಲಿ ನನ್ನ ವಿಮರ್ಶೆಗಳನ್ನು ನಾನೆಂದೂ ನಡೆಸಿದವನಲ್ಲ. ನನಗೆ ತೋಚಿದ್ದನ್ನು ಅಭಿಮಾನ-ಸಂಪ್ರದಾಯಗಳಿಗೆ ಪೂರ್ಣವಾಗಿ ಒಳಗಾಗದೆ ಸ್ಪಷ್ಟವಾಗಿ ವಿನೀತಿಯಿಂದ ಹೇಳಬೇಕೆಂಬುದೇ ನನ್ನ ಪ್ರಯತ್ನ. Every criticism is an autobiography ಎಂದು ಒಬ್ಬ ದಾರ್ಶನಿಕ ಹೇಳಿರುವನೆಂದು ಕೇಳಿದ್ದೇನೆ. ನನ್ನ ವಿಷಯದಲ್ಲಿ ಅದು ಸತ್ಯ. ನನ್ನ ಭಾವನೆಗಳು ನನ್ನವು. ಇಲ್ಲವೆ ನಾನು ಸರಿ ಎಂದು ಅಂಗೀಕರಿಸಿದವು. ಇದರಲ್ಲಿ ಹಳೆ-ಹೊಸರಾಗ-ವಿರಾಗಗಳಿರುವುದಿಲ್ಲ. ಇದ್ದರೂ ದುರ್ಬಲವಾಗಿ ಇರುವುವಷ್ಟೆ.

ವಿಮರ್ಶೆ ಸಹ ಕಾವ್ಯದಂತೆಯೇ. ಹಳೆಯ ಹೊಸ ರೀತಿಗಳ ಕಲಬೆರಕೆ ಇಂದಿನ ಕಾವ್ಯದಲ್ಲಿ ಎಷ್ಟು ಇದೆಯೋ ವಿಮರ್ಶೆಯಲ್ಲಿಯೂ ಅಷ್ಟಕ್ಕೆ ಕಡಿಮೆ ಇಲ್ಲ. ಆದ್ದರಿಂದ ಭವಭೂತಿಯ ವಾಕ್ಯವನ್ನು ಮರೆತುಹೋಗದ ನಿಮ್ಮಂಥವರಿಗೆ 'ನಾವೆಲ್ಲಿಗೆ ಹೋಗುತ್ತಿದ್ದೇವೆ' ಎಂಬ ನಿರ್ವಿಣ್ಣ ಪ್ರಶ್ನೆ ಬರುವ ಅಗತ್ಯವಿಲ್ಲ. 'ನಾನೆಲ್ಲಿಗೆ ಹೋಗುತ್ತಿದ್ದೇ'ನೆಂದು ಪ್ರಶ್ನಿಸಿಕೊಂಡರೆ ಸಾಕು. ಅದು ಸದ್ಗತಿಯ ಕಡೆ ಒಯ್ಯುತ್ತದೆ. ಸಾಹಿತ್ಯ ಮಾರ್ಗಗಳಲ್ಲಿ 'ಯಶಸೇಽರ್ಥ ಕೃತೇ' ಎಂಬ ಫಲದೃಷ್ಟಿಯೇ ಅಂದು ಇಂದು ಹಲವರನ್ನು ನಡೆಸುವ ರಥ. ಅದು ಸಹಜವೇ. ಸಾಧ್ಯವಾದಲ್ಲಿ ನಮ್ಮನ್ನೂ ನಾವು ಬೇರೆ ದಾರಿಗಳ ಕಡೆಗೆ ನಡೆಸಿಕೊಳ್ಳಬಹುದು.

ಶ್ರೀ ಪ್ರಭಾಕರಶಾಸ್ತ್ರಿಯವರನ್ನು ಕುರಿತ ನಿಮ್ಮ ಅಭಿಪ್ರಾಯ ಸರ್ವಥಾ ಸತ್ಯ, ಬಾಳಿನಲ್ಲಿ ಎಷ್ಟೋ ಅಡ್ಡಗೋಡೆಗಳನ್ನು ದಾಟಿದ ಧೀರರಿವರು. ಅಂಥವರು ಯಾವಾಗಲೂ ಕೆಲವರೇ.

ತಿಕ್ಕನನನ್ನು ಕುರಿತ ವಿಮರ್ಶೆಯನ್ನು ನಾನೇನು ಮಾಡಬಲ್ಲೆ ? ನಾವು ಅವನ ಕಾವ್ಯಕ್ಕೆ ಮಾಡಬೇಕಾದ ಸೇವೆಯೆಂದರೆ ಹಲವು ಸಾರಿ ಅದನ್ನು ಓದಿಕೊಳ್ಳುವುದು. ಬಹಿರಂಗವಾಗಿ ಓದಿ ಹೇಳುವುದು, ಅಷ್ಟೆ. ವ್ಯಾಸಮಹರ್ಷಿಯ ಮನಸ್ಸನ್ನು ತಿಳಿಯಬಲ್ಲವರಾಗಿದ್ದರೆ ತಿಕ್ಕನನನ್ನು ನಾವು ಸ್ವಲ್ಪವಾದರೂ ಅನುಭವಿಸಬಹುದು. ಆ ಅನುಭವಕ್ಕೆ ಮೌನವೇ ಉಪಾಸನೆ. ಮಹಾಪದಾರ್ಥಗಳೆಲ್ಲವೂ ಅಂಥವೇ.

ಏನೋ ಬರೆದೆ. ನಿಮ್ಮ ಸೌಜನ್ಯವೇ ಇದಕ್ಕೆ ಕಾರಣ. ತಿರುಪತಿಗೆ ನೀವು ಬರುವುದನ್ನು ಕಾಯುತ್ತೇನೆ.

ನನ್ನ 'ಸಪ್ತಶತೀಸಾರಮು' ಪ್ರತಿಯೊಂದನ್ನು ನಿಮಗೆ ಇಂದು ಕಳುಹಿಸುತ್ತಿದ್ದೇನೆ. ತಲುಪಿದ ವಿಷಯವನ್ನು ನಿಮ್ಮ ಕ್ಷೇಮಸಮಾಚಾರದೊಡನೆ ತಿಳಿಸಲು ಬೇಡುತ್ತೇನೆ.

ನಿಮ್ಮವ,

ರಾ. ಅನಂತಕೃಷ್ಣಶರ್ಮ

# ಶೇಷೇಂದ್ರಶರ್ಮ–ಇಂದಿರಾದೇವಿಗೆ

ಅನು (ತೆಲುಗು) : ಸಿ. ಸುಶೀಲ

ಪ್ರೀತಿಗೆ ಎಷ್ಟು ನೋವನ್ನಾದರೂ ಅನುಭವಿಸಲು ಯೋಗ್ಯವಾದಷ್ಟು ಮೌಲ್ಯ ಇದೆ. ಅದಕ್ಕಾಗಿಯೇ ಇಂದು ನಾನು ಓಡುತ್ತಿರುವ ಪ್ರವಾಹವನ್ನು ನೋಡುತ್ತಾ ಈ ಸೇತುವೆಯ ಮೇಲೆ ಒಬ್ಬನೇ ಕುಳಿತು ಚಂದ್ರನಿಂದ ಬೆಳ್ದಿಂಗಳನ್ನು ನನ್ನ ಮೇಲೆ ಸುರಿಸಿ ಕೊಳ್ಳುತ್ತಿದ್ದೇನೆ.

ನಿನ್ನ ನಗುವಿನಲ್ಲಿ ಯಾವ ಹೂವುಗಳಿವೆ ಎಂದರಿಯದ ದಿನಗಳಲ್ಲಿ ನಾನು ನಿನ್ನನ್ನು ಪ್ರೀತಿಸಿದೆ. ಇಟ್ಟಿಗೆಗಳಿಂದ ಅಲ್ಲ, ಕನಸಿನಿಂದ, ಹೂಬಿಟ್ಟ ಕೊಂಬೆಗಳಿಂದ ಮನೆಕಟ್ಟಿ ನಿನ್ನೊಂದಿಗೆ ಬಾಳಬೇಕೆಂದುಕೊಂಡೆ.

ಆಕಾಶಕ್ಕಾಗಿ ಚಂದ್ರನಿದ್ದಂತೆ ನೀನು ನನಗಾಗಿ ಇರುವುದಾಗಿ ಭಾವಿಸಿದೆ. ಕೋಗಿಲೆ ಮಾವಿನಕೊಂಬೆಗೆ ಅಂಟಿಕೊಂಡಂತೆ, ನೀನು ನನ್ನ ಬಾಹುಗಳಿಗೆ ಅಂಟಿ ಕೊಳ್ಳುತ್ತೀಯೆ ಅಂದುಕೊಂಡೆ.

ನನ್ನ ಬಾಳನ್ನು ಗೆದ್ದಾಗಲೆಲ್ಲ ನೀನು ನನ್ನ ಕಣ್ಣಿನಲ್ಲಿ ಆನಂದದ ಒಂದು ಹನಿಯಾಗಿ ನಿಲ್ಲುತ್ತೀಯ. ನೀನು ಹೆಣ್ಣಲ್ಲ-ಸೌಂದರ್ಯದ ಬಿರುಗಾಳಿ. ಸೀರೆ ಹಾಗು ತಾರೆ ಸೇರಿಸಿ ನೇಯ್ದ ರೂಪ ನಿನ್ನದು....ನಿನ್ನ ಕೈ ಹೂವಿನ ಹಾರ. ನಿನ್ನ ನಗೆ ನಕ್ಷತ್ರದ ಸಾರ. ಆದ್ದರಿಂದಲೇ ಗಾಳಿ ಎಲೆಗಳಲ್ಲಿ ಶಾಶ್ವತವಾಗಿ ನಲ್ಲಸಾದಂತೆ ನಿನ್ನ ಕಣ್ಣಿನ ನೀಲಿ ಬಂದರಿನಲ್ಲಿ ವಡಕ್ಕಾಗಿ ಹುಡುಕಿದ ನಾವಿಕನಂತಾಗಿಬಿಟ್ಟೆ.

ನೀನಿಲ್ಲದಿದ್ದರೆ ಆಕಾಶ ನನಗೇನಾಗುತ್ತದೆ ? ಸೂರ್ಯ ಚಂದ್ರ ನಕ್ಷತ್ರಾದಿಗಳು ಬೆರೆತ ಶೂನ್ಯ ಅದು.

ನನ್ನನ್ನು ಕವಿ ಎಂದು ಕರೆಯಬೇಡ. ನಾನು ಕನಸಿನ ವ್ಯಾಪಾರಿ. ನನ್ನ ಅಂಗಡಿಗಳಲ್ಲಿ ನಿನ್ನ ಕಣ್ಣುಗಳು ಅಮೂಲ್ಯವಾದ ಎರಡು ಭೂಗೋಳಗಳು.

ಏಕೆ ಹಾಗೆ ನೋಡುವೆ ? ಹೃದಯಕ್ಕೆ ಬೆಂಕಿ ಹಚ್ಚುವೆ. ಎರಡೂ ಬಾಗಿಲು ತೆರೆದು ನಿನ್ನ ಕಥೆಗಳ ಭಂಡಾರವನ್ನು ಕೊಡು. ನನ್ನ ಭಾವನೆಗಳಲ್ಲಿ ತೂಗಾಡುವ ಹೂವೆ, ಏಕೆ ಹಾಗೆ ನೋಡುವೆ ?

ಬಟ್ಟಲುಗಳಿಂದ ಹೀರುವ ಮದಿರೆಯಿಂದ ಅಮಲೇರುವುದು, ಇಳಿಯುವುದು. ಆದರೆ ನಿನ್ನ ಕಣ್ಣುಗಳಿಂದ ಹೀರಿದ ಮಧುವಿನಿಂದ ಅಮಲೇರುವುದೇ ವಿನಾ ಇಳಿಯುವುದಿಲ್ಲ, ಏಕೆ ಹಾಗೆ ನೋಡುವೆ....

ಮನಸ್ಸನ್ನು ಬಚ್ಚಿಡಬಲ್ಲೆ, ಆದರೆ ಆ ನೋಟವನ್ನು ಏನು ಮಾಡುವೆ. ನನ್ನ ನೋಟ ಗಿಳಿಯಾಗಿ ನಿನ್ನನ್ನು ಕಾಡುತ್ತದೆ. ಕಣ್ಣಿನಿಂದ ನೋಡುವ ಮೊದಲೇ ನಿನಗೆ ದಾಸನಾದೆ, ಏಕೆ ಹಾಗೆ ನೋಡುವೆ....

ನೀನಿಲ್ಲದ ಶೂನ್ಯವನ್ನು ಈ ಪ್ರಪಂಚದಲ್ಲಿ ಯಾವುದೂ ತುಂಬಲಾರದು. ನನ್ನೀ ಪಯಣದಲ್ಲಿ ನಿನ್ನ ಅಧರವೇ ಮಧುವಾಗಿ ನಿಂತಿದೆ. ಏಕೆ ಹಾಗೆ ನೋಡುವೆ. ನಕ್ಷತ್ರಗಳು ರಾಜ್ಯವಾಳುವ ಸಮಯವಿದು. ಇದನ್ನು ಯಾರಿಗೂ ಕೊಡಲಾರೆ. ಸಮಯ ಮಿಂಚುತ್ತಿದೆ. ಪ್ರೀತಿ ಕುಟುಕುತ್ತಿದೆ....ಏಕೆ ಹಾಗೆ ನೋಡುವೆ....

ನನ್ನ ದನಿಯಲ್ಲಿ ಮೊದಲು ನಿಟ್ಟುಸಿರನ್ನು ಮೂಡಿಸಿದ ಸೌಂದರ್ಯ ಸಾಮಾನ್ಯವಾದುದಲ್ಲ. ನನ್ನ ಹೃದಯದಲ್ಲಿ ಕೆರಳಿದ ಉರಿಯನ್ನು ನೀನೂ ಹಂಚಿಕೋ.

('ಪ್ರೇಮಲೇಖಲು' ಗ್ರಂಥದಿಂದ)

# ಪ್ರೇಮಚಂದ್–ಚತುರ್ವೇದಿಯವರಿಗೆ

ಅನು (ಹಿಂದಿ) : **ಎಚ್.ಎಸ್. ಪಾರ್ವತಿ**

ಶ್ರೀ ಚತುರ್ವೇದಿಯವರು ಪ್ರೇಮಚಂದರನ್ನು ಕಲ್ಕತ್ತೆಗೆ ಬರಮಾಡಿಕೊಳ್ಳಲು ಕಾತರರಾಗಿದ್ದರು. ಒಮ್ಮೆ ತುಲಸೀ ಜಯಂತಿಯೆಂದು ಕಾರ್ಯಕ್ರಮದಲ್ಲಿ ಭಾಗ ವಹಿಸಲು ಪ್ರೇಮಚಂದರನ್ನು ಆಹ್ವಾನಿಸಿದರು. ಆ ಸಂದರ್ಭದಲ್ಲಿ ಪ್ರೇಮಚಂದ್ ಬರೆದ ಪತ್ರ :

ನಾನಿಲ್ಲಿಗೆ ಬರಲಾಗಲಿಲ್ಲ. ಅದಕ್ಕಾಗಿ ನನ್ನನ್ನು ಬೈದುಕೊಳ್ಳಬೇಡಿ. ನೀವು ತುಲಸೀ ಜಯಂತಿಯ ಬಂಧನವನ್ನು ನನ್ನ ಮೇಲೆ ಹೊರಿಸದೇ ಇದ್ದಿದ್ದರೆ ನಾನು ಬರುತ್ತಿದ್ದೆ. ಆದರೆ ತುಲಸೀದಾಸರ ಕಾವ್ಯವನ್ನು ಅಧ್ಯಯನ ಮಾಡದ, ಅವರ ಹೆಸರಿನೊಂದಿಗೆ ಸೇರಿಕೊಂಡಿರುವ ಅತಿಮಾನವ ಕಲ್ಪನೆಯಲ್ಲಿ ಎಂದೂ ನಂಬಿಕೆ ಇಡದ ಒಬ್ಬ ವ್ಯಕ್ತಿಯನ್ನು ತುಲಸೀ ಜಯಂತಿಯ ಸಂದರ್ಭದಲ್ಲಿ ಅಧ್ಯಕ್ಷತೆ ವಹಿಸಲು ಆಹ್ವಾನಿಸಿರುವುದು ಹಾಸ್ಯಾಸ್ಪದ ಎನ್ನಿಸುತ್ತದೆ. ತುಲಸೀದಾಸರು ರಾಮನ ದರ್ಶನ ಪಡೆದಿದ್ದರು, ಹನುಮಂತನ ದರ್ಶನ ಪಡೆದಿದ್ದರು ಎನ್ನುವುದೆಲ್ಲ ಗೋಜಲು ಗೋಜಲಾದ ವಿಚಾರ. ಆದರೆ ತುಲಸೀಭಕ್ತರು ನನ್ನ ಈ ನಾಸ್ತಿಕತೆಯ ಮಾತುಗಳನ್ನು ಸಹಿಸಬಲ್ಲರೇ ? ಅವರು ಹುಟ್ಟಿದ್ದು ವಿಕ್ರಮ ಸಂವತ್ಸರ ಹತ್ತರಂದೋ ಇಪ್ಪತ್ತರಂದೋ ನಲವತ್ತರಂದೋ ಅದರಿಂದ ಆಗಬೇಕಾದ್ದೇನಿದೆ ? ಇದಕ್ಕೆಲ್ಲ ಇಷ್ಟೊಂದು ಬುದ್ಧಿಯ ಅಪವ್ಯಯವನ್ನು ಮಾಡಬೇಕೇ ? ಅವರೊಬ್ಬ ಮಹಾನ್ ಕವಿಯಾಗಿದ್ದರು, ಅವರ ಕಾವ್ಯದ ಬಗ್ಗೆ ಆಲೋಚನೆ ಮಾಡಿ. ದಾರ್ಶನಿಕವಾಗಿ, ಮನೋವೈಜ್ಞಾನಿಕವಾಗಿ ಅವರ ಕಾವ್ಯವನ್ನು ವಿಮರ್ಶೆ ಮಾಡಿ. ಆದರೆ ಅವರನ್ನು ದೇವರು ಎಂದೇಕೆ ಹೇಳುತ್ತೀರಿ ?

## ರಸೆಲ್-ಕುಮಾರಿ ಬ್ರುಕ್ಸ್‌ರಿಗೆ

---

ಅನು : ಬಿ.ವೈ. ಲಲಿತಾಂಬ

ಪ್ರೀತಿಯ ಕುಮಾರಿ ಬ್ರುಕ್ಸ್

ಚೈನಾಗಿಂತ ಅಮೆರಿಕಾದ ಸಮಸ್ಯೆ ಜಟಿಲವಾಗಿದೆ ಎಂದು ನೀನು ಹೇಳುವುದು ನನಗೂ ಸರಿ ಎನಿಸುತ್ತದೆ. ಮುಂದಿನ ಒಂದು ಅಥವಾ ಎರಡು ಶತಮಾನಗಳಲ್ಲಿ ಅಮೆರಿಕಾ ಹೆಚ್ಚು ಮಹತ್ವದ ರಾಷ್ಟ್ರವಾಗುತ್ತದೆಯಾದರೂ ಎರಡನೆಯ ನಂಬರು ಚೀನಾಕ್ಕೇ ಸಿಗುತ್ತದೆ. ನಿನ್ನ ದೇಶದಲ್ಲಿ ಮಾನವ ಸಂಬಂಧಗಳು ಮೂಲಭೂತವಾಗಿ ದೋಷಪೂರ್ಣವಾಗಿದೆ ಎಂಬುದು ನನ್ನ ಅಭಿಪ್ರಾಯ. ನಮ್ಮ ಸ್ಕೂಲುಗಳಲ್ಲಿ ಅಮೆರಿಕಾ ದೇಶದ ಮಕ್ಕಳು ಅನೇಕ ಮಂದಿ ಇದ್ದಾರೆ. ಆದರೆ ಅವರ ತಾಯಂದಿರಲ್ಲಿ ತಾಯ್ತನದ ಕೊರತೆಯನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ. ಮಕ್ಕಳ ಬಗೆಗೆ ಅವರ ಪ್ರೀತಿ ಬತ್ತಿಹೋಗಿದೆ ಎಂದನಿಸುತ್ತದೆ. ಇಡೀ ಪಶ್ಚಿಮ ರಾಷ್ಟ್ರಗಳೇ ಈ ದಿಸೆಯಲ್ಲಿ ಸಾಗುತ್ತಿವೆ ಅನಿಸುತ್ತದೆ. ಮುಂದೆ ಬರುವ ಸರಕಾರಗಳೆಲ್ಲವೂ ಒಂದಾದ ಮೇಲೊಂದರಂತೆ ಪರಿವಾರದ ಸಂಬಂಧ ಅನ್ನುವುದನ್ನೇ ಇಟ್ಟುಕೊಳ್ಳದಂತಿರುವ ನಾಗರಿಕರನ್ನು ತಯಾರು ಮಾಡುತ್ತವೆ. ತಾಯಂದಿರನ್ನು ಕುರಿತು ಜಾನ್ ಬಿ ವಾಟ್ಸನ್ನರ ಪುಸ್ತಕ ಓದಿ, ನಾನು ಅವನನ್ನು ಮೊದಲೆಲ್ಲ ಹುಚ್ಚ ಅಂದುಕೊಳ್ಳುತ್ತಿದ್ದೆ. ಈಗ ನಾನು ಅವನನ್ನು ಅಮೆರಿಕಾದವನು ಅಂತ ಅರ್ಥ ಮಾಡಿಕೊಂಡಿದ್ದೇನೆ. ಅವನು ಅಮೆರಿಕಾದ ತಾಯಿಯರನ್ನು ಅರ್ಥಮಾಡಿಕೊಂಡಿದ್ದಾನೆ, ತಾಯಂದಿರು ಮಕ್ಕಳಿಂದ ದೂರ ಇದ್ದ ಹಾಗೆಲ್ಲ, ಮಕ್ಕಳ ಮನಸ್ಸಿನಲ್ಲಿ ಪ್ರಪಂಚದ ಬಗೆಗೆ ತಿರಸ್ಕಾರದ ಭಾವನೆ ಮೂಡಿಕೊಳ್ಳುತ್ತದೆ. ಅವರು ಅಪರಾದಿಗಳಾಗ ತೊಡಗುತ್ತಾರೆ.

ನಿನ್ನವ,
ಬರ್ಟ್ರಾಂಡ್ ರಸೆಲ್

5–3–1930

## ಖಲೀಲ್ ಜಿಬ್ರಾನ್ ತನ್ನ ಪ್ರೇಯಸಿಗೆ

---

ಅನು : ಬಿ. ವೈ. ಲಲಿತಾಂಬ

ನ್ಯೂಯಾರ್ಕ್ ಮೇ 7, 1911
ಭಾನುವಾರ ಮಧ್ಯಾಹ್ನ

ಈಗ ತಾನೇ ಮ್ಯೂಜಿಯಂಗೆ ಹೋಗಿದ್ದೆ. ಇಲ್ಲಿರುವ ಎಲ್ಲ ಸುಂದರ ವಸ್ತುಗಳನ್ನೂ ನಿನ್ನ ಜೊತೆ ನೋಡಬೇಕೆಂದು ಎನಿಸುತ್ತದೆ. ಎಂದಾದರೂ ಇವನ್ನೆಲ್ಲಾ ನಾವಿಬ್ಬರೂ ಜೊತೆಗೂಡಿ ನೋಡಬೇಕು. ಯಾವುದಾದರೂ ಕಲಾಕೃತಿಯ ಮುಂದೆ ಒಂಟಿಯಾಗಿ ನಿಂತಾಗ ನನಗೆ ಒಂಟಿತನ ಹೆಚ್ಚಿದ ಹಾಗೆ ಅನಿಸುತ್ತದೆ. ಸ್ವರ್ಗದಲ್ಲೇ ಆಗಲಿ ಪೂರ್ತಿ ಸಂತೋಷವನ್ನು ಪಡೆದುಕೊಳ್ಳಬೇಕೆಂದರೆ ಪ್ರೀತಿಯ ಜೊತೆಗಾರ್ತಿ ಇರಬೇಕಾದದ್ದು ಎಷ್ಟು ಅವಶ್ಯಕ ಅನಿಸುತ್ತದೆ.

ನ್ಯೂಯಾರ್ಕ್
ಶನಿವಾರ 6ನೇ ಜನವರಿ 1912

ಈ ದಿನಕ್ಕಿಂತ ನನಗೆ ಮಂಗಳವಾರದ ದಿನ ಹುಟ್ಟು ಹಬ್ಬ ಎಂದು ಅನಿಸುತ್ತಿತ್ತು. ಕೆಲವು ಗಂಟೆಗಳ ವಾಸ್ತವ, ಮನುಷ್ಯನಿಗೆ ಸಂತೋಷದ ಹೊಸ ಅನುಭವವನ್ನು ಕೊಡುತ್ತದೆ, ವೇದನೆಯ ಹೊಸ ತಿರುವು ಕೊಡುತ್ತದೆ, ಜೀವನದ ಹೊಸ ಮಾರ್ಗಗಳನ್ನು ತೆರೆಯುತ್ತದೆ. ಆ ಸಂಜೆ ಕಳೆದ ಮೇಲೆ ನಿನಗೆ ಬರೆಯಬೇಕು ಎಂದು ಎಷ್ಟು ಸಲ ಅನ್ನಿಸಿತೋ, ಆದರೆ ಪ್ರತಿಯೊಂದು ಬಾರಿಯೂ ಆಳವಾದ ಸಮುದ್ರದ

ಹಾಗೆ, ಅಜ್ಞಾತ ಪ್ರದೇಶಗಳಲ್ಲಿರುವ ಹಾಗೆ ಯಾವುದೋ ಮೌನ ನನ್ನನ್ನು ಆವರಿಸಿಕೊಂಡಿತು, ಈಗ ನೋಡು, ನಿನಗೆ ಪತ್ರ ಬರೆಯುತ್ತಾ ಕುಳಿತಿದ್ದೇನೆ, ಜೀವನದ ಭಯಂಕರವಾದ ತತ್ವವೇ ಮೂಕವಾಗಿ ಹೋಗಿದೆ ಎಂದು ನನಗನಿಸುತ್ತಿದೆ. ಭಯಂಕರ ವಾದ ಬಿರುಗಾಳಿ ಹಬ್ಬುವುದಕ್ಕೆ ಮುಂಚೆ ಕೆಲವು ಗಂಟೆಗಳು ಯಾವುದೋ ತೀವ್ರತರ ವಾದ ದುಃಖ ಅಥವಾ ಸಂತೋಷದ ದಿನಗಳು ಒಂದೇ ರೀತಿ ಇರುತ್ತವೆ. ಹರಡದ ರೆಕ್ಕೆಗಳು, ನಡುಗದ ಜ್ವಾಲೆಗಳಿಂದ ತುಂಬಿದ, ಮೂಕವಾದ ಗಾಢವಾದ ದಿನಗಳು ಅವು !

ಭಾನುವಾರ, 21 ಜನವರಿ 1912

ಆ ಮೌನ ಇನ್ನೂ ದೂರವಾಗಿಲ್ಲ. ನಾನು ಈಗಲೂ ಈ ಚಿಕ್ಕ ಸ್ಟುಡಿಯೋದಲ್ಲಿ ಸ್ವರ್ಗ-ನರಕದ ನಡುವೆ ಹರಿಯುವ ನೆರಳನ್ನು ಎವೆ ಇಕ್ಕದೆ ನೋಡುತ್ತಿದ್ದೇನೆ, ಹಿಂದೆ ಎಂದೂ ಇಲ್ಲದ ರೀತಿಯಲ್ಲಿ ಬದುಕುತ್ತಿದ್ದೇನೆ. ಬೆಳಗು ಜ್ವಲಂತ ಚಿಂತನೆಗಳ ಗುಡಾಣದ ಹಾಗೆ ಕಾಣಿಸುತ್ತದೆ. ರಾತ್ರಿ ವಿಚಿತ್ರವಾದ ಸ್ವಪ್ನಗಳ ಸಮುದ್ರದಲ್ಲಿ ಮುಳುಗಿದ ಹಾಗೆ ದಿನ ಕಳೆದು ರಾತ್ರಿಯಾಗುವ ಮೊದಲು ಸಮಯ ಏಳು ಪದರದ ಮುಸುಕಿನಲ್ಲಿ ಮರೆ ಯಾದ ಹಾಗೆ ಅನಿಸುತ್ತದೆ.

ಜೀವನದಲ್ಲಿ ವೇದನೆಯಿಂದ ಕೂಡಿದ ಸುಖವಿದೆ. ಹಾಗೆಯೇ ಸಿಹಿಯಿಂದ ಕೂಡಿದ ನೋವು ಕೂಡಾ ಇದೆ. ನಿನ್ನ ಖಲೀಲ್ ಈ ಸುಖ ದುಃಖಗಳೆರಡರಲ್ಲೂ ಆಳವಾಗಿ ಮುಳುಗಬೇಕು, ಆಗ ಮಾತ್ರ ಅವನು ಒಂದು ಪಂಕ್ತಿ ಬರೆಯುವುದು ಹೇಗೆ, ಒಂದು ಚಿತ್ರ ಬಿಡಿಸುವುದು ಹೇಗೆ ಎಂಬುದನ್ನು ಅರಿಯಬಲ್ಲ, ಅಲ್ಲವೇ ?

# ಬೋರಿಸ್ ಪಾಸ್ತರ್‌ನಾಕ್–ಪ್ರಾವ್ಡಾ ಸಂಪಾದಕರಿಗೆ

ಅನು. ವೈ. ಲಲಿತಾಂಬ

ಸತ್ಯಕ್ಕಾಗಿ ಇರುವ ಒತ್ತಡದಿಂದ ನಾನು ಈ ಪತ್ರ ಬರೆಯುತ್ತಿದ್ದೇನೆ. ದಯ ಮಾಡಿ ನನ್ನ ಈ ಹೇಳಿಕೆಯನ್ನು ಪ್ರಕಟಪಡಿಸಿ.

ನನ್ನೊಂದಿಗೆ ಘಟಿಸಿರುವುದಕ್ಕೆಲ್ಲ ನಾನೇ ಕಾರಣ. ಹಾಗೆಯೇ ನೋಬೆಲ್ ಪ್ರಶಸ್ತಿಯನ್ನು ಕುರಿತು ನಾನು ತೆಗೆದುಕೊಂಡಿರುವ ನಿರ್ಣಯವೂ ಸ್ವತಂತ್ರವಾದದ್ದು. ಸ್ವೇಚ್ಛೆಯಿಂದ ಕೂಡಿದ್ದು. ನೊಬೆಲ್ ಪ್ರಶಸ್ತಿಯನ್ನು ನಾನು ಒಂದು ಸಾಹಿತ್ಯ ಸಮ್ಮಾನವೆಂದು ಭಾವಿಸಿ ಆಹ್ಲಾದ ಪಡೆದೆ, ಸ್ವೀಡೀ ಅಕಾಡೆಮಿಯ ಕಾರ್ಯದರ್ಶಿಗಳಾದ ಆಂಡರ್ಸ್ ಅಸ್ಟರ್‌ಲಿಂಗ್‌ರವರಿಗೆ ತಾರು ಮಾಡಿ ನನ್ನ ಸಂತೋಷವನ್ನೂ ತಿಳಿಸಿದ್ದೆ. ಆದರೆ ನಾನು ಮಾಡಿದ್ದು ತಪ್ಪು. ಈ ತಪ್ಪಿನ ಹಿಂದೆ ಕಾರಣಗಳೂ ಇದ್ದವು–ಐದು ವರ್ಷಗಳ ಹಿಂದೆ ಈ ನನ್ನ ಪುಸ್ತಕ ಪ್ರಕಟವಾಗುವುದಕ್ಕೂ ಮೊದಲು ಈ ಪ್ರಶಸ್ತಿಗೆ ನನ್ನ ಹೆಸರನ್ನು ಸೂಚಿಸಿದ್ದರು.

ಒಂದು ವಾರ ಕಳೆದನಂತರ ಈ ಕಾದಂಬರಿಯ ಬಗ್ಗೆ ರಾಜಕೀಯದ ದೊಡ್ಡ ಬಿರುಗಾಳಿ ಹಬ್ಬಿಕೊಂಡಿತು. ಹಾಗೂ ಈ ಪ್ರಶಸ್ತಿಯ ಹಿಂದೆ ರಾಜಕೀಯ ಅಭಿಪ್ರಾಯಗಳ ಒತ್ತಡ, ರಾಜಕೀಯದ ಉದ್ದೇಶಗಳು ಇವೆ, ಅದರ ಪರಿಣಾಮ ಭಯಂಕರವಾದುದು ಎಂಬುದರ ಅರಿವಾಯಿತು. ಆಗ ನಾನು ಯಾರಿಂದಲೂ ಪ್ರಭಾವಿತನಾಗದೇ ನಾನೇ ಪ್ರಶಸ್ತಿಯನ್ನು ಬಿಟ್ಟುಕೊಟ್ಟೆ.

ನಿಕಿತಾ ಖ್ರುಶ್ಚೇವ್‌ರಿಗೆ ಬರೆದ ಪತ್ರದಲ್ಲಿ ನಾನು, ನನ್ನ ಹುಟ್ಟು, ಜೀವನ, ನನ್ನ ಕೆಲಸಗಳೆಲ್ಲವೂ ರಷ್ಯಾದಿಂದ ಅವಿಚ್ಛಿನ್ನವಾದವು ಎಂದು ತಿಳಿಸಿದೆ. ರಷ್ಯಾದಿಂದ ಹೊರಕ್ಕೆ ಹೋಗಿ ನಿರ್ವಾಸಿತನಾಗಿ ಜೀವನ ನಡೆಸುವುದನ್ನು ನಾನು ಊಹಿಸಲಾರೆ. ರಷ್ಯಾದ ಬಗ್ಗೆ ನನ್ನ ಒಳಸಂಬಂಧಗಳನ್ನು ವಿವರಿಸುವಾಗ ರಷ್ಯಾ ಭೂಮಿ, ಹಳ್ಳಿಯ

ಅಂಚಿನೊಂದಿಗೆ ಆತ್ಮೀಯತೆಯನ್ನು ಕುರಿತಷ್ಟೇ ನಾನು ಹೇಳಿರಲಿಲ್ಲ. ಅಲ್ಲಿನ ಜನ, ಅದರ ಇತಿಹಾಸ, ಉಜ್ವಲ ವರ್ತಮಾನ, ಅದರ ಭವಿಷ್ಯತ್ತಿನೊಡನೆಯೂ ನನ್ನ ಆತ್ಮೀಯತೆಯನ್ನು ತೋಡಿಕೊಂಡಿದ್ದೆ. ಆದರೆ ನನ್ನ ಈ ಕಾದಂಬರಿಯಲ್ಲಿ ನಾನೇ ಮಾಡಿದ ಅವಿವೇಕದಿಂದ ನನ್ನ ಮತ್ತು ರಷ್ಯಾದ ನಡುವಿನ ಒಡೆಯಲಾಗದ ಬಂಧನದ ಮಧ್ಯೆ ಗೋಡೆಯು ಹಾಗೆ ವಿಘ್ನಗಳು ಅವತರಿಸಿಕೊಂಡವು.

ರಾಜ್ಯಕ್ಕಾಗಲಿ, ನನ್ನ ಜನರಿಗಾಗಲಿ ಯಾವುದೇ ತೊಂದರೆ ಮಾಡುವ ಉದ್ದೇಶ ನನ್ನದಾಗಿರಲಿಲ್ಲ.

ಈ ಕಾದಂಬರಿ ಅಕ್ಟೋಬರ್ ಕ್ರಾಂತಿ ಮತ್ತು ಸೋವಿಯತ್ತಿನ ವ್ಯವಸ್ಥೆಯ ಬುನಾದಿಯ ವಿರುದ್ಧ ರಚಿಸಿರುವ ಕೃತಿ ಎಂಬ ತಿಳುವಳಿಕೆ ಮೂಡುತ್ತದೆಂದು ನನಗೆ ನೋವಿ ಮಿರ್‌ನ ಸಂಪಾದಕರು ಎಚ್ಚರಿಕೆ ಇತ್ತರು. ನನಗೆ ಇದು ಗೊತ್ತಿರಲಿಲ್ಲ. ಈಗ ಪಶ್ಚಾತ್ತಾಪವಾಗುತ್ತಿದೆ.

ಈ ಕಾದಂಬರಿಯನ್ನು ತೀವ್ರವಾಗಿ ವಿಮರ್ಶೆ ಮಾಡಿ ಕೆಲವು ನಿರ್ಣಯಗಳಿಗೆ ಬಂದಲ್ಲಿ ಇಂತಹ ಭಾವನೆ ಮೂಡಬಹುದು. ನಾನು ಕೆಲವು ಭ್ರಾಮಕ ನಿರ್ಣಯಗಳಿಗೆ ತಲುಪಿದ್ದೇನೆ :

ಪ್ರತಿಯೊಂದು ಕ್ರಾಂತಿ ಕೂಡ ಐತಿಹಾಸಿಕವಾಗಿ ಕಾನೂನು ಬಾಹಿರವಾದ ಘಟನೆಯಾಗಿರುತ್ತದೆ. ಉದಾಹರಣೆ ಎಂದರೆ ಅಕ್ಟೋಬರ್ ಕ್ರಾಂತಿ. ಇದರಿಂದ ರಷ್ಯಾಕ್ಕೆ ವಿಪತ್ತು ಬಂದೊದಗಿತು. ರಷ್ಯಾದಲ್ಲಿ ಪರಂಪರಾಗತವಾಗಿ ಬೆಳೆದುಬಂದಿದ್ದ ಬುದ್ಧಿಜೀವಿಗಳ ಗುಂಪನ್ನು ನಾಶಪಡಿಸಿತು ಎಂದು ನಾನು ಹೇಳುತ್ತಿರುವ ಹಾಗೆನಿಸುತ್ತದೆ. ನನ್ನ ಕಡೆಯಿಂದ ಸ್ಪಷ್ಟನೆ ನೀಡಿ ಹೇಳುತ್ತೇನೆ. ನಾನು ಹೀಗೆಲ್ಲ ಬೇಜವಾಬ್ದಾರಿಯ ನಿರ್ಣಯಗಳಿಗೆ ತಲಪುವುದಿಲ್ಲ. ಹಾಗಿದ್ದರೂ ನೊಬೆಲ್ ಪ್ರಶಸ್ತಿ ಪಡೆದ ನನ್ನ ಈ ಕಾದಂಬರಿ, ಇಂತಹ ಚಿಂತಾಜನಕವಾದ ವಿವರಣೆಗಳಿಗೆ ಕಾರಣವಾಗಿರುವುದರಿಂದ ನಾನು ಈ ಪ್ರಶಸ್ತಿಯನ್ನು ಬಿಟ್ಟುಕೊಟ್ಟಿದ್ದೇನೆ.

ಪುಸ್ತಕದ ಪ್ರಕಟಣೆಯನ್ನು ಒಂದು ವೇಳೆ ತಡೆಹಿಡಿಯಲು ಸಾಧ್ಯವಾಗಿರಬಹುದಾಗಿದ್ದರೆ, ನಾನು ಇಟಲಿಯ ಪ್ರಕಾಶಕನಿಗೆ ಬರೆದಿದ್ದ ಹಾಗೆ, (ಇತರೆ ದೇಶಗಳಲ್ಲಿ ನನಗೆ ತಿಳಿಯದಂತೆ ಆಗಲೇ ಪುಸ್ತಕವನ್ನು ಛಾಪಿಸಿದ್ದರು) ನಾನು ಆಂಶಿಕವಾಗಿಯಾದರೂ ಈ ಭ್ರಮೆಗಳನ್ನು ದೂರಗೊಳಿಸಬಹುದಾಗಿತ್ತು. ಆದರೆ ಈಗ ಬಹಳ ತಡವಾಯಿತು.

ಇಂತಹ ಅಶಾಂತಿಪೂರ್ಣವಾರದಲ್ಲೂ ನನಗೆ ಏನೂ ತೊಂದರೆಯಾಗಿಲ್ಲ, ನನ್ನ ಜೀವನಕ್ಕೆ, ಸ್ವಾತಂತ್ರ್ಯಕ್ಕೆ ಯಾವುದಕ್ಕೂ ಧಕ್ಕೆ ತಗುಲಿಲ್ಲ. ನನ್ನಿಷ್ಟದಿಂದಲೇ ಈ ನಿರ್ಣಯಕ್ಕೆ ತಲುಪಿದ್ದೇನೆಂದು ನಾನು ಒತ್ತಿ ಹೇಳುತ್ತೇನೆ. ನಾನು ಯಾವುದೇ ಒತ್ತಾಯದಿಂದ ವಂಚನಾಮಯವಾದ ಕೆಲಸ ಮಾಡುವವನಲ್ಲ, ನನ್ನ ವಿವೇಕಕ್ಕೆ ವಿರೋಧಿಯಾಗಿ ಕೆಲಸ ಮಾಡುವದಿಲ್ಲ ಎಂದು ನನ್ನ ನಿಕಟವರ್ತಿಗಳಿಗೆ ತಿಳಿದಿದೆ. ಈ ವಿಷಯದಲ್ಲೂ ಅಷ್ಟೆ. ಯಾರೂ ನನ್ನನ್ನು ಹೀಗೆಯೇ ಮಾಡು, ಹಾಗೆ ಮಾಡಬೇಡ

ಎಂದೂ ಒತ್ತಾಯ ಮಾಡಿಲ್ಲ. ನಾನು ಸ್ವೇಚ್ಛೆಯಿಂದ ಈ ಹೇಳಿಕೆ ನೀಡುತ್ತಿದ್ದೇನೆ–ನನ್ನ ಮತ್ತು ಎಲ್ಲರ ಒಟ್ಟು ಭವಿಷ್ಯದ ಬಗ್ಗೆ ನನಗೆ ಪೂರ್ಣ ನಂಬಿಕೆ ಇದೆ. ನನ್ನ ಜನರಮೇಲೆ ನನಗೆ ಅಭಿಮಾನವಿದೆ.

ನಾನು ತಪ್ಪಿತಸ್ಥನಲ್ಲ ಎಂಬುದನ್ನು ಸಾಬೀತುಪಡಿಸುವ ಶಕ್ತಿ ನನಗಿದೆ ಎಂದೂ, ನನ್ನ ಸ್ನೇಹಿತರ ನಂಬಿಕೆ ನನ್ನ ಮೇಲೆ ಒಂದೇ ರೀತಿ ಇರುತ್ತದೆ ಎಂದೂ, ನನಗೆ ನಂಬಿಕೆ ಇದೆ.

—ಬೋರಿಸ್ ಪಾಸ್ತರ್‌ನಾಕ್

(ನೊಬೆಲ್ ಪ್ರಶಸ್ತಿಯನ್ನು ತಿರಸ್ಕರಿಸಿದ ಸೋವಿಯತ್ ಲೇಖಕ ಬೋರಿಸ್ ಪಾಸ್ತರ್‌ನಾಕ್ 'ಪ್ರಾವ್ದಾ'ದ ಸಂಪಾದಕರಿಗೆ ಬರೆದ ಪತ್ರ)

---

## ಅವಂತಿ ಸುಂದರಿ ರಾಜವಾಹನನಿಗೆ ಬರೆದ ಪತ್ರ

ಎಷ್ಟು ಕೋಮಲ ನಿನ್ನ ದೇಹ ಓ ಕುಮಾರ
ನಿನ್ನಂಥ ಚೆಲುವರಿನ್ನಾರಿದ್ದಾರೆ ?
ದೇಹದ ಮೃದುತ್ವವನು ಕಂಡುಬಯಸಿದೆ ಮನಸು
ದೇಹದಂತೆಯೆ ಮನವು ಮೃದುವಾದರೆ !

(ದಂಡಿಯ ದಶಕುಮಾರ ಚರಿತೆ)
ಅನು : ಎಚ್. ಎಸ್. ವಿ.

# ರಣವೀರ ರಾಂಗ್ರಾ–ಇಳಾಚಂದ್ರ ಜೋಶಿ ಅವರಿಗೆ

ಅನು : ಬಿ. ವೈ. ಲಲಿತಾಂಬ

ಮಾನ್ಯ ಜೋಶಿಯವರಲ್ಲಿ

ಗೌರವ ಪೂರ್ವಕ ವಂದನೆಗಳು.

ನಿಮ್ಮ ಇತ್ತೀಚಿನ ಕಾದಂಬರಿ 'ಋತುಚಕ್ರ'ವನ್ನು ಕೆಲವು ಪತ್ರಿಕೆಗಳಲ್ಲಿ ಓದಿದೆ. ಆ ದಿನ ಆಕಾಶವಾಣಿಯಲ್ಲಿ ನೀವು ಭಾಷಣ ಮಾಡುವಾಗ ಕೂಡ ಈ ಕಾದಂಬರಿಯಲ್ಲಿ ನೀವು ಅನೇಕ ಹೊಸ ವಿಷಯಗಳನ್ನು ಚಿಂತಿಸಿರುವಿರೆಂದೂ, ಇಲ್ಲಿಯವರೆವಿಗೂ ಯಾರೂ ಮುಟ್ಟದಿದ್ದ ಸಮಸ್ಯೆಗಳನ್ನು ಬಿಡಿಸಿರುವಿರೆಂದೂ ತಿಳಿಸಿದಿರಿ, ಉದಾಹರಣೆಗೆ ಅಸ್ತಿತ್ವವಾದಿಗಳಾಗಿರುವ ಯುವ ಜನಾಂಗವನ್ನು ಕಾಡುತ್ತಿರುವ ಸಂದೇಹಗಳು, ಅವರ ಮಾನಸಿಕ ತೊಳಲಾಟಗಳು ; ಜೊತೆಗೆ ಮನುಷ್ಯನ ಸಾಮೂಹಿಕವಾದ ಸುಪ್ತಚೈತನ್ಯ ದಲ್ಲಿ ಕೇಂದ್ರಸ್ಥವಾದ ಪರಮಾಣು ಸ್ಫೋಟಿಸುವ ಕಲ್ಪನೆ, ಮಧ್ಯ ವಯಸ್ಸಿನವರ ಅನಾಸಕ್ತ ಕಾಮ, ಸ್ವಚ್ಛಂದವಾದ ಪ್ರಕೃತಿಯ ನೆರಳಲ್ಲಿ ವಿಕಾರಗಳಿಂದ ಮುಕ್ತಿ ಪಡೆಯುವುದು ಮುಂತಾದುವು.

'ಋತುಚಕ್ರ'ದಲ್ಲಿ ಸಾಂಪ್ರದಾಯಿಕವಾದ ಒಂದು ಚರ್ಚೆಯಿಂದ ಸ್ವಲ್ಪ ದೂರ ಸರಿದು ಜನ್ಮಾಂತರವಾದವನ್ನು ವಿವರಿಸಿದ್ದೀರಿ. ಅದು ಸ್ವಲ್ಪ ಮಟ್ಟಿಗೆ ವೈಜ್ಞಾನಿಕ ವಾಗಿದೆ ಅನಿಸುತ್ತದೆ. ಆದರೆ ಅಲ್ಲಿ ನೀವು ಚಿತ್ರಾಳನ್ನು ಜೀವನದ ಪ್ರವಾಹದಲ್ಲಿ ನೇರ ವಾಗಿ ಸಿಕ್ಕಿಹಾಕಿಕೊಂಡಿರುವಂತೆ ಚಿತ್ರಿಸಿದ ಮೇಲೆ ಜೀವನ–ಮೃತ್ಯುವಿನ ಮಧ್ಯೆ ಇರುವ ಕಂದರಕ್ಕೆ ಅವಳು ಬೆಲೆಯನ್ನು ಏಕೆ ಕೊಡುವುದಿಲ್ಲ ಎಂಬುದು ಅರ್ಥವಾಗುವುದಿಲ್ಲ. ಜೀವನದ ಚೈತನ್ಯದ ಜೊತೆ ಒಂದು ಸಾರಿ ಮನುಷ್ಯ ಹೊಂದಿಕೊಂಡ ಮೇಲೆ ಸಾವನ್ನು ಕಂಡರೆ ಅಂಜಬಾರದು. ಎಂತಹ ಭಯಂಕರವಾದ ಸನ್ನಿವೇಶವನ್ನು ಎದುರಿಸಬೇಕಾ ದಾಗ ಕೂಡ ಅವನು ನಿರ್ಭಯನಾಗಿರುತ್ತಾನೆ. ಅವನು ಜೀವನದಿಂದ ಪಲಾಯನ

ಮಾಡುವುದಿಲ್ಲ. ಇಷ್ಟಲ್ಲದೆ ಜೀವನ ಇನ್ನೂ ಹೇಗಿರುತ್ತದೋ ಎಂದು ಕಲ್ಪಿಸಿಕೊಂಡು ಹೆದರಿ ಸ್ವಇಚ್ಛೆಯಿಂದ ಆತ್ಮಹತ್ಯೆ ಮಾಡಿಕೊಳ್ಳುವುದಿಲ್ಲ. ಜೀವನದ ನಿರಂತರ ಪ್ರವಾಹವನ್ನು ಸಾವು ತುಂಡರಿಸಲು ಸಾಧ್ಯವೇ ಇಲ್ಲ ಎಂಬುದನ್ನು ಅವನು ವಿಚಾರಮಾಡಿ ತಿಳಿದುಕೊಂಡಿರುತ್ತಾನೆ. ಹೀಗಾಗಿ ಆತ್ಮಹತ್ಯೆ ಮಾಡಿಕೊಂಡು ಜೀವನದ ಅಖಂಡ ಪ್ರವಾಹದಿಂದ ತಪ್ಪಿಸಿಕೊಳ್ಳುವುದಂತೂ ಅಸಾಧ್ಯ. ಇಂತಹ ಚಿಂತನೆ ಮಾಡಿದ ಮೇಲೆ ಜೀವನದಲ್ಲಿ ಮುಳುಗುವ ಸ್ವಭಾವ ಕಾಣಿಸಬೇಕು, ಆತ್ಮಹತ್ಯೆ ಅಲ್ಲ. ಹೀಗಾಗಿ ಇಲ್ಲಿ ಚಿತ್ರಾಳ ಆತ್ಮಹತ್ಯೆಯ ಕಲ್ಪನೆ ನಿಮ್ಮ ಚಿಂತನೆಯ ಜೊತೆ ಮೇಳಯಿಸುವದಿಲ್ಲ. 'ಋತುಚಕ್ರ'ದಲ್ಲಿ ಬರುವ ದಾದಾ, ಚಿತ್ರಾಳ ಆತ್ಮಹತ್ಯೆಯನ್ನು ದೃಢೀಕರಿಸುವ ಹಾಗೆ ಕಾಣುತ್ತಾರೆ. ನಮಗೂ ಈ ವಿಷಯ ಸರಿ ಅನಿಸುವುದಿಲ್ಲ. ಅದಕ್ಕಾಗಿಯೇ ನೀವು ಚಿತ್ರಾಳಿಂದ ಒಂದು ಸ್ಪಷ್ಟನೆ ಬೇರೆ ಕೊಡಿಸಿದ್ದೀರಿ. ಚಿತ್ರಾ ಋಣಮುಕ್ತಳಾಗುವ ವಿಷಯ ಪ್ರಸ್ತಾಪಿಸುತ್ತಾಳೆ. ಆದರೆ 'ಆತ್ಮಹತ್ಯೆ'ಯ ಎದುರಿಗೆ ಈ ಸ್ಪಷ್ಟನೆ ಬಹಳ ಪೇಲವವಾಗಿ ಪರಿಣಮಿಸುತ್ತದೆ. 'ಆತ್ಮಹತ್ಯೆ' ಯಾವುದೇ ರೀತಿಯದಾಗಿದ್ದರೂ ಈಶಾವಾಸ್ಯ ಉಪನಿಷತ್ತಿನಲ್ಲಿ ಬರುವ 'ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇಕೇಚಾತ್ಮಹನೋ ಜನಾ !' ಎಂಬ ಆಕ್ಷೇಪಣೆಯಿಂದ ಬಿಡಿಸಿಕೊಳ್ಳಲಾರದು ಎಂದು ನನಗನಿಸುತ್ತದೆ.

'ಋತುಚಕ್ರ'ವನ್ನು ಕುರಿತು ಬರೆಯಲು, ಮೊದಲು ನಿಮ್ಮ ಅಭಿಪ್ರಾಯವನ್ನು ತಿಳಿಯುವುದು ಒಳಿತು ಎಂದು ಭಾವಿಸುತ್ತೇನೆ,

ತಮ್ಮ ವಿಶ್ವಾಸಿ
ರಣವೀರ ರಾಂಗ್ರಾ

## ಇಳಾಚಂದ್ರ ಜೋಶಿ ಅವರ ಉತ್ತರ

---

ಪ್ರಿಯ ಡಾ. ರಾಂಗ್ರಾ,

ನೀವು ಹೇಳುವುದು ಸರಿ. 'ಆತ್ಮಹತ್ಯೆ ಮಾಡಿಕೊಂಡು ಮನುಷ್ಯ ಜೀವನದ ಅಖಂಡ ಪ್ರವಾಹದಿಂದ ದೂರವಾಗಲು ಸಾಧ್ಯವಿಲ್ಲ.' ನಾನು ಕೂಡ 'ಋತುಚಕ್ರ'ದಲ್ಲಿ ಈ ವಿಷಯವನ್ನು ಕುರಿತು ಅನೇಕ ವೇಳೆ ಪ್ರಸ್ತಾಪಿಸಿದ್ದೇನೆ. 'ಋತುಚಕ್ರ'ದ ದಾದಾ ಚಿತ್ರಾಳ ಆತ್ಮಹತ್ಯೆಯನ್ನು ದೃಢೀಕರಿಸುತ್ತಾರೆಂದು ನೀವು ಹೇಳುವುದು ತಪ್ಪು.

ಚಿತ್ರಾಳ ಆತ್ಮಹತ್ಯೆಗೆ ಯಾವುದೇ ಸೈದ್ಧಾಂತಿಕವಾದ ಹಿನ್ನೆಲೆ ಇಲ್ಲ. ಎಂತಹ ದೊಡ್ಡ ಮನುಷ್ಯ ಕೂಡ ಜೀವನದಲ್ಲಿ ಒಂದೇ ಸಮನೆ ಬರುವ ಚಿಕ್ಕ-ಪುಟ್ಟ 'ಪಿನ್‌ಪ್ರಿಕ್ಸ್'ನಿಂದ ಬೇಸರಗೊಂಡು ಆತಂಕಕ್ಕೊಳಗಾಗುತ್ತಾನೆ. ದೊಡ್ಡ-ದೊಡ್ಡ ವಿಪತ್ತುಗಳನ್ನು ನಗು-ನಗುತ್ತಾ ಎದುರಿಸುವ ಶಕ್ತಿಯನ್ನೂ ಪಡೆದುಕೊಳ್ಳುತ್ತಾನೆ. ಜೀವನದ 'ಪಿನ್‌ಪ್ರಿಕ್ಸ್'ನ್ನ ಚಿತ್ರಾ ಕಂಡು ರೊಚ್ಚಿಗೇಳುತ್ತಾಳೆ. ಮನುಷ್ಯನ ಮನಃಸ್ಥಿತಿಯ ವಿಪರ್ಯಾಸವೆಂದರೆ ಜೀವನದ ಪಿನ್‌ಪ್ರಿಕ್ಸ್ ಅವನ ಮನಸ್ಸನ್ನು ಕೆಡಿಸಿ ಬುಡಮೇಲು ಮಾಡಿಹಾಕುತ್ತವೆ. ಅಂತಹ ಪರಿಸ್ಥಿತಿಯಲ್ಲಿ ಅವನ ಜೀವನದ ದೊಡ್ಡ-ದೊಡ್ಡ ಸಿದ್ಧಾಂತಗಳು ಅವನಿಗೆ ಮಾರ್ಗದರ್ಶನ ಮಾಡುವಲ್ಲಿ ಅಸಮರ್ಥವಾಗುತ್ತವೆ. ಇದೊಂದು ಕ್ರೂರ ವಾಸ್ತವ. ಈ ವಿಷಯವನ್ನು ಗಮನದಲ್ಲಿಟ್ಟುಕೊಂಡು ಚಿತ್ರಾಳ ಆತ್ಮಹತ್ಯೆಯನ್ನು ಕುರಿತು ವಿಚಾರ ಮಾಡಿ.

ದಾರ್ಶನಿಕವಾದ ವಾಸ್ತವಕ್ಕೂ, ಜೀವನದ ವಾಸ್ತವಕ್ಕೂ ನಡುವೆ ದೊಡ್ಡ ಕಂದರವಿದೆ, ಚಿತ್ರಾಳ ಆತ್ಮಹತ್ಯೆ ಈ ವಾಸ್ತವವನ್ನು ಸಾಬೀತುಗೊಳಿಸುತ್ತದೆ. ಆದರಿಂದ ಅವಳ ಸ್ವಭಾವದಲ್ಲಿ ಕಾಣುವ ಜಟಿಲತೆ ಸುಳ್ಳೆನಿಸುವುದಿಲ್ಲ. ನಾನು ಬಹಳ ವಿಚಾರ ಮಾಡಿ 'ಚಿತ್ರಾ'ಳನ್ನು ರೂಪಿಸಿದ್ದೇನೆ, ಅವಳ ಕೊನೆಯನ್ನೂ ಚಿತ್ರಿಸಿದ್ದೇನೆ. ಜೀವನದ ಪಿನ್‌ಪ್ರಿಕ್ಸ್‌ನ್ನು ಎದುರಿಸುವವನು ದೊಡ್ಡ ಮನುಷ್ಯನಾಗುತ್ತಾನೆ, ಚಿತ್ರಾ ತನ್ನ ಜೀವನದಲ್ಲಿ ಬಂದ ಚಿಕ್ಕಪುಟ್ಟ ಕ್ರೂರ ಹಾಗೂ ಘಾತಕವಾದ ಪಿನ್‌ಪ್ರಿಕ್ಸ್‌ನ್ನು ಸಹಜವಾಗಿ, ಪ್ರಾಮಾಣಿಕವಾಗಿ ಬಿಡಿಸುತ್ತಾ ಎಷ್ಟು ಮುಂದುವರಿದಿದ್ದಳು ಎಂಬ ವಿಷಯವನ್ನು ಕುರಿತು ದಾದಾ ಚಿತ್ರಾಳನ್ನು ದೊಡ್ಡವಳೆಂದು ಒಪ್ಪುತ್ತಾರೆ, ಒಂದು ಪರಿಸ್ಥಿತಿಯಲ್ಲಿ ಚಿತ್ರಾ ಕೂಡ ಮುಂದುವರಿಯಲು ಆಗಲಿಲ್ಲ.

ತಮ್ಮವ,
ಇಳಾಚಂದ್ರ ಜೋಶಿ

# ಆಲ್ಬರ್ಟ್ ಕಾಮೂ-ವಾರ್ತ್‌ಗೆ

---

ಅನು : ಎಚ್.ವಿ. ರಾಮಚಂದ್ರರಾವ್

ಪ್ರಿಯ ವಾರ್ತ್,

'ಪ್ಲೇಗ್'ನ್ನು ಕುರಿತಾದ ನಿಮ್ಮ ಅಭಿಪ್ರಾಯಗಳು ಬಹು ಆಕರ್ಷಕವೆನಿಸುವಂತಿದ್ದರೂ, ಅವುಗಳನ್ನು ಒಪ್ಪುವುದು ನನ್ನಿಂದ ಆಗದ ಮಾತು. ಒಂದು ಕೃತಿಯನ್ನು ಪ್ರಾಮಾಣಿಕವಾಗಿ, ತರ್ಕಸಂಗತವೆನಿಸುವ ತೆರದಲ್ಲಿ ಬೆಲೆ ಕಟ್ಟುವಾಗ, ನಿಮ್ಮ ಎಲ್ಲಾ ಟೀಕೆ ಟಿಪ್ಪಣಿಗಳು ನ್ಯಾಯೋಚಿತ ಹೌದು ಎಂದು ಸಾಧಿಸಿಕೊಳ್ಳಬಹುದು; ಮತ್ತೆ ಇಂತಹ ದುಸ್ಸಾಹಸವೆನಿಸುವ ಪ್ರಯತ್ನ ಸಾಧ್ಯವಾಗಬಹುದು, ಉಲ್ಲೇಖನೀಯವೂ ಆಗಬಹುದು. ಆದರೆ ಕಥೆಯ ಜಾಡು ಎತ್ತಸಾಗಿರಬೇಕು, ಅದರ ಪ್ರಯೋಜನವೇನು, ಹಾಗೂ ಅದರ ದೂರಗಾಮಿಯಾದ ಪರಿಣಾಮವೇನು ಎನ್ನುವತ್ತ ಲೇಖಕನು ಬೊಟ್ಟು ಮಾಡಿ ತೋರಿಸಲಾಗಬಹುದಾದ, ಅನಿವಾರ್ಯವೆನಿಸುವ ಕೆಲವು ಅಂಶಗಳು ಅವನ ಪ್ರತಿಯೊಂದು ಕೃತಿಯಲ್ಲೂ ಇದ್ದೇ ಇರುತ್ತವೆಂದು ನಾನು ಭಾವಿಸುತ್ತೇನೆ. ಉದಾಹರಣೆಗೆ "ಪ್ಲೇಗ್, ಇತಿಹಾಸ ಮತ್ತು ರಾಜನೀತಿಯಿಂದ ಮನುಷ್ಯನು ದೂರವಿರಬೇಕು ಎಂಬ ಪಾಠವನ್ನು ಕಲಿಸಿ ಎಲ್ಲ ವಿರೋಧಗಳ ನಡುವೆ ಅವನನ್ನು ಅಸಹಾಯಕನನ್ನಾಗಿಸಿ. ಒತ್ತಲೆಗೊಳಿಸಿ ಬಿಡುತ್ತದೆಂದು ಅನಿಸುವಂತಿದೆ,"—ಎಂದು ಅಭಿಪ್ರಾಯಪಟ್ಟಿರುವುದರಲ್ಲಿ ಕಥಾಪ್ರಪಂಚದ ಅನಿವಾರ್ಯ ತತ್ವಗಳನ್ನು ತಿಳಿದಿರದಂತಹ ಸ್ಥಿತಿಯೇ ವ್ಯಕ್ತಗೊಳ್ಳುತ್ತದೆ.

1. 'ಪ್ಲೇಗ್'ನ್ನು ಅನೇಕ ಸ್ತರ (ಹಂತ) ಗಳಲ್ಲಿ ಓದುವುದಾಗಬೇಕು ಎಂದು ನಾನು ಬಯಸಿದ್ದೆ. ಇದು ಕಥೆಯ ಪಕ್ಷ, ಅಪೇಕ್ಷಿತವಾದ ಹಾಗೂ ಅನಿವಾರ್ಯವೆನಿಸುವ

ಒಂದು ತತ್ತ್ವವನ್ನು ಮೈಗೂಡಿಸಿಕೊಂಡಿದೆ. ನಾಜೀವಾದದ ವಿರುದ್ಧ ಬಂಡೆದ್ದ ಐರೋಪ್ಯ ಆಂದೋಲನದ ಸೆಣಸಾಟಗಳ ನಡುವಿನಿಂದ ಈ 'ಸಂಯೋಜಿತ ತತ್ತ್ವ' ರೂಹುಂಗೊಂಡಿದೆ. ಯುರೋಪಿನ ಎಲ್ಲ ದೇಶಗಳೂ ಆ ಶತ್ರುವನ್ನು ಸಹಿಸಿಕೊಂಡರೂ ಅದನ್ನು ಹೆಸರಿಸಿದ್ದು ಈಗಷ್ಟೇ ಎನ್ನುವ ಅಂಶ ಇದಕ್ಕೆ ಪುರಾವೆಯಾಗಿದೆ ಎಂದು ಹೇಳ ಬಹುದು. ನಾಜೀವಾದದ ವಿರುದ್ಧ ಆವಿರ್ಭವಿಸಿದ ಐರೋಪ್ಯ ದೇಶಗಳ ಪ್ರತ್ಯಾಂ ದೋಳನದ ಜನ-ಹೋರಾಟದಲ್ಲಿ, 'ಪ್ಲೇಗ್'ನ ಕೆಲವು ಅಂಶಗಳನ್ನು ನಾಜೀವಾದದ ಅಮಾನವೀಯತೆ ಹಾಗೂ ರಾಕ್ಷಸೀ ಪ್ರವೃತ್ತಿಗಳನ್ನು ಬಯಲಿಗೆಳೆಯುವ ಸಲುವಾಗಿ ಉದ್ಧರಿಸಲಾಗಿದೆ. ಈ ಪ್ರತ್ಯಾಂದೋಳದಲ್ಲಿ 'ಪ್ಲೇಗ್' ಸತ್ತವರ ಪಟ್ಟಿ ಅಷ್ಟೇ ಅಲ್ಲ; ಅದಕ್ಕಿಂತಲೂ ಹಿರಿದಾದ ಹಾಗೂ ಭವಿಷ್ಯಕ್ಕೆ ಸಂಬಂಧಪಟ್ಟ 'ವಸ್ತು' ಎನ್ನುವುದು ಈ ಮಾತಿಗೆ ಸಾಕ್ಷಿ.

2. 'ಪ್ಲೇಗ್' ಕಡೇ ಪಕ್ಷ 'ಅಪರಿಚಿತ'ದ ಮುಂದಿನ ಹೆಜ್ಜೆ ಹೌದು. ಅಪರಿಚಿತ ದಲ್ಲಿ, ವ್ಯಕ್ತಿಯೊಬ್ಬನದೇ ಸಂಘರ್ಷ ಅಭಿವ್ಯಕ್ತಿಯನ್ನು ಪಡೆದಿದೆ. 'ಪ್ಲೇಗ್'ನಲ್ಲಿ ಇಂತಹ ಅನೇಕ ವ್ಯಕ್ತಿಗಳು ಒಗ್ಗೂಡಿದ ಸಮೂಹದ ಸಂಘರ್ಷ-ಸಾಮರ್ಥ್ಯಕ್ಕೆ ಒಪ್ಪಿಗೆ ಹಾಗೂ ಅಭಿವ್ಯಕ್ತಿ ದೊರೆತಿದೆ. ಇದರಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಭಾಗಿಯಾಗ ಬೇಕಾಗಿ ಬಂದಿದೆ. ಅಪರಿಚಿತದ ನಂತರ 'ಪ್ಲೇಗ್'ನಲ್ಲಿ, ವ್ಯಕ್ತಿವಾದದಿಂದ ಸಾಮೂ ಹಿಕ ಸಹಯೋಗ ಹಾಗೂ ಸಹಭಾಗಿತ್ವದತ್ತ ನನ್ನ ಮೊದಲ ಪ್ರಯತ್ನಗಳು ಬೆಳವಣಿ ಗೆಯ ಬಿಸ್ತು ಹಾಗೂ ಸಂಕೇತಗಳಾಗಿವೆ.

3. ನಿಮ್ಮ ಪುಸ್ತಕದಲ್ಲಿ ನೀವು ತೋರಿಸಿರುವ 'ಪ್ರತ್ಯೇಕತೆಯ ಆ ಸ್ಥಿತಿ'ಯ ಮಹತ್ವವು ಇದರ ಮೇಲೆ ಬೆಳಕು ಚೆಲ್ಲುತ್ತದೆ. ರಾಬರ್ಟ್ (ಪ್ಲೇಗಿನ ನಾಯಕ) ತನ್ನೊಳಗೆ ಈ ವಿಚಾರಗಳನ್ನು ಹೊರುತ್ತಾನೆ. ತನ್ನ ವ್ಯಕ್ತಿಗತ ಜೀವನದ ಗಡಿ ಗಳನ್ನು ಮತ್ತು ಸ್ವಾರ್ಥಗಳನ್ನು ಬಿಟ್ಟುಕೊಟ್ಟು ಸಾಮೂಹಿಕವಾದ ಸಂಘರ್ಷದಲ್ಲಿ ಸ್ಥಾನಗಳಿಸಿಕೊಳ್ಳುತ್ತಾನೆ. ಅವನ ಗೆಳೆಯರ ಹಾಗೂ ಅವನ ಶೌರ್ಯಗಳನ್ನು ಪ್ರತ್ಯೇಕಿಸುವುದು ಸಾಧ್ಯವಿಲ್ಲ ಹೇಗೆ ? ಅವರುಗಳಲ್ಲಿ ಬಂಧುತ್ವ ಹಾಗೂ ಸಹಯೋಗದ ಅಂಶಗಳು ಸಮಾನ ರೂಪದಲ್ಲಿ ಹೇಗೆ ಕೆಲಸಮಾಡುತ್ತಿವೆ ಮತ್ತು ಅವುಗಳಲ್ಲಿ ವಿಭೇದ ವನ್ನುಂಟು ಮಾಡುವುದರಲ್ಲಿ ಇಂದಿಸವರೆಗಿನ ಇತಿಹಾಸ ತನ್ನ ಅಂತಿಮ ಪ್ರಯೋಗ ಗಳವರೆಗೂ ಹೇಗೆ ಸೋತು ಹೋಗಿದೆ ಎಂಬುದನ್ನು ನಾನು ನನ್ನ ಉಪ ಸ್ಥಾಪನೆಯಲ್ಲಿ ತೋರಿಸಬೇಕಾಗಿದೆ.

4. ಪ್ಲೇಗ್ ಉಪೇಕ್ಷಿತರೂ ಹಾಗೂ ದೌರ್ಜನ್ಯಕ್ಕೆ ತುತ್ತಾದವರೂ ಆದ ವ್ಯಕ್ತಿಗಳ ಭಾವೀ ಹೋರಾಟಕ್ಕೆ ಒಪ್ಪಿಗೆ ಹಾಗೂ ಉದ್ಘೋಷಣೆಯೊಂದಿಗೆ ಮುಕ್ತಾಯ ಗೊಳ್ಳುತ್ತದೆ. ಅನಂತಕಾಲದಿಂದ ಎಡೆಬಿಡದೆ ದೌರ್ಜನ್ಯಕ್ಕೆ ಸಿಕ್ಕಿಕೊಂಡಿರುವ ಮಾನವ ಸಮೂಹ 'ತಾನಾಶಾಹಿ, (ಸರ್ವಾಧಿಕಾರತ್ವದ) ಆತಂಕ ಹಾಗೂ ಅದರ ಅಸಂಖ್ಯ ಮುಖಗಳ ವಿರುದ್ಧ ಬಂಡಾಯ ಹೂಡಿದೆ ಎಂಬ ಸತ್ಯವನ್ನು ಬಿಂಬಿಸಿದೆ. ಮುಂಬರುವ

ದಿನಗಳಲ್ಲೂ, ವ್ಯಕ್ತಿಗತ ವಿಚಾರಗಳಲ್ಲಿ ಸಮಾನತೆ ಇಲ್ಲದಂತಹ ಸ್ಥಿತಿಯಲ್ಲೂ, ಈ ಹೋರಾಟ ಅಳಿಯದೆ ಉಳಿದುಕೊಂಡೇ ಇರುತ್ತದೆ.

ನಾನು ನನ್ನ ಅಭಿಪ್ರಾಯಗಳನ್ನು ಇನ್ನೂ ಸ್ಪಷ್ಟ ಶಬ್ದಗಳಲ್ಲಿಡಬಯಸುತ್ತೇನೆ. ನಾನು ಪ್ಲೇಗ್ ಅನ್ನು ಬರೆದಾಗ ಕೃತಿ ಹಾಗೂ ಅದರ ಸೌಂದರ್ಯದ ಎಲ್ಲ ಅಂಶಗಳತ್ತ ಗಮನ ನೀಡಿಲ್ಲ ಎಂದು ಒಪ್ಪಿಕೊಂಡೆ ಎಂದೇ ತಿಳಿಯೋಣ! ಆದರೂ 'ಕೃತಿಕಾರನು ವರ್ತಮಾನದ ಇತಿಹಾಸದಲ್ಲಿ ಭಾಗಿಯಾಗಲು ನಿರಾಕರಿಸಿದ್ದಾನೆ' ಎಂದು ನೀವು ಹೇಳಿರುವ ಮಾತು ಹೇಗೆ ನಿಜವಾದೀತು ? (ನೀವು ಇದಕ್ಕೆ ಬೆಲೆ ಕಟ್ಟುವ ಕ್ರಮದಲ್ಲೇ 'ಪ್ಲೇಗ್' ಅಪಮೌಲ್ಯಗೊಳ್ಳುವಂತಹ. ಅದಕ್ಕೆ ಸಂಬಂಧಪಡದ ಸೌಂದರ್ಯದ ಅನೇಕ ಮಾನದಂಡಗಳನ್ನು ಮುಂದೆ ತಂದು ನಿಲ್ಲಿಸಿದ್ದೀರಿ). ನಾನು ಅತ್ಯಂತ ಸೌಹಾರ್ದ ಹಾಗೂ ಸ್ನೇಹಪೂರ್ಣವಾಗಿ ನಿಮಗೆ ಹೇಳ ಹೋದರೂ ನನ್ನ ಪಾಲಿಗೆ ಅದು ದುಸ್ಸಾಧ್ಯವೂ ನಿರಾಶಾಜನಕವೂ, ಆಗಿಹೋಗಿದೆ ಎಂಬುದಂತೂ ನಿಜ.

5. 'ಪ್ಲೇಗ್' ವಿರುದ್ಧ ಸೆಣಸುವ ಮನುಷ್ಯರು ಅಂತಹ ವಿಪತ್ತು ಆಧಿದೈವಿಕವಾಗಿ ಅವರನ್ನು ಮುತ್ತಿದಾಗ, ಅದು ಭಾಗ್ಯಚಕ್ರದ ಒಂದು ಪ್ರಕೋಪ ಎನಿಸಿದಾಗ ಏನು ಮಾಡುವರೆಂಬ ನಿಮ್ಮ ಪ್ರಶ್ನೆ ಅರ್ಥವಿಲ್ಲದ್ದು ; ಅದು ಹೇಗೆ ಅರ್ಥವಿಲ್ಲದ್ದು ಎಂದರೆ ಇದು ಭೂತಕಾಲದಲ್ಲಿ ಕೇಳಿಸಿಕೊಳ್ಳಬೇಕಾಗಿದ್ದ ಪ್ರಶ್ನೆ–ಆಗ ಅದಕ್ಕೆ ಸಮರ್ಪಕ ಉತ್ತರ ಸಿಗುತ್ತಿತ್ತು. ಈ ರೂಪದಲ್ಲೇ, ಪ್ಲೇಗಿನಲ್ಲಿ, ಈ ಸಂಘರ್ಷಕ್ಕೆ ಅಭಿವ್ಯಕ್ತಿ ಸಿಕ್ಕಿದೆ. ಸಂಘರ್ಷ ಮಾಡುವ ಸೈನಿಕರು ತಾನಾಶಾಹಿಯೊಡನೆ ಸ್ಥೂಲ ಹಾಗೂ ಸೂಕ್ಷ್ಮ ಎರಡೂ ಹಂತದಲ್ಲಿ ಸೆಣಸಿದ್ದರು. ಮತ್ತೆ ಮುಂದೆ ಸೆಣಸುವರು. ತಾನಾಶಾಹಿಯ ಆತಂಕದ ಸ್ವರೂಪ ಮತ್ತು ಇವರ ಸೆಣಸಾಟದ ದಿಕ್ಕು ಯಾವುದೇ ಆಗಿರಬಹುದು. ಇವರಂತೂ ಖಂಡಿತವಾಗಿ ಬಂದೇಳುವರು. ಹೀಗೆಂದೇ ನಾನು ಇಂತಹ ಆತಂಕವನ್ನು ಹೆಸರಿಸಿ ಕರೆದಿಲ್ಲ : ಏಕೆಂದರೆ ಇದು ಯಾವ ರೂಪದಲ್ಲಾದರೂ ನಮ್ಮ ಮುಂದೆ ನಿಲ್ಲಬಹುದು. ನನ್ನನ್ನು ವಿರೋಧಿಸಿ ಎದುರು ಬೀಳುವ ಯಾವುದೇ ಆತಂಕ ಮತ್ತು ತಾನಾಶಾಹಿಗೆ ಅದರ ದಿಕ್ಕು ಹಾಗೂ ಗತಿ ಏನೇ ಆಗಿರಲಿ, ಪ್ಲೇಗು ಒಂದು ಉತ್ತರ.

ನಾನು ಇತಿಹಾಸವನ್ನು ನಿಷೇಧಿಸಿದ್ದೇನೆ ಅಥವಾ ನಾನು ಇತಿಹಾಸ ವಿರೋಧಿ ಚಿಂತಕ ಎಂದು ಹೇಳುವುದು ಇತಿಹಾಸವನ್ನು ತಾನಾಶಾಹಿಯ ಪ್ರತೀಕವಾಗಿ ಕಾಣದೇ ಇರುವವರೆಗೂ ನಿಜ ಆಗುವುದಿಲ್ಲ. ನಾನು ಇತಿಹಾಸವನ್ನು ತಾನಾಶಾಹಿಯಾಗಿ ಕಾಣಬಯಸುವ ಸ್ಥಿತಿಯನ್ನು ಸಮರ್ಥಿಸುವುದಿಲ್ಲ. ಈ ರೀತಿಯ ಸ್ವಕಪೋಲಕಲ್ಪಿತ ಹಾಗೂ ವ್ಯರ್ಥವಾದ ಆಪಾದನೆಗಳಿಗೆ ಉತ್ತರಿಸದಿರುವುದು ಭಾಗ್ಯವಾದವನ್ನು ತಲೆಯ ಮೇಲೇರಿಸಿಕೊಂಡಂತೆ. ಇದಕ್ಕೆ ತದ್ವಿರುದ್ಧವಾಗಿ ಭಾಗ್ಯಚಕ್ರವು ನೀಡಿರುವ 'ಏಕಾಕಿತನ'ದ ಸ್ಥಿತಿಯಿಂದ ನಾನು ಸದಾ ಬೇರಾಗಿ ನಿಂತವನು ಎಂಬ ಅನಿಸಿಕೆ ನನಗೆ ಮನವರಿಕೆಯಾಗಿದೆ.

ಈ ಉತ್ತರ ಪ್ರತ್ಯುತ್ತರಗಳ ಕಾರಣ ನಮ್ಮ ನಿಮ್ಮ ನಡುವೆ ಯಾವುದೇ ದುಃಖ ಉಂಟಾಗುವುದಿಲ್ಲ, ನಮ್ಮ ಮೈತ್ರಿ ಸದಾ ಸ್ಥಿರವಾಗಿ ಉಳಿಯುತ್ತದೆ ಎಂದು ನಾನು ನಿಮಗೆ ಭರವಸೆ ನೀಡುತ್ತೇನೆ. ಲೇಖಕರಾಗಿ ವ್ಯಕ್ತಿಯಾಗಿ, ನಿಮ್ಮ ಬಗ್ಗೆ ನನ್ನ ವಿಚಾರಗಳು ಸದಾ ಉತ್ತಮವಾಗೇ ಇರುತ್ತವೆ.

ತಮ್ಮವ,
11-1-1955 ಆಲ್ಬರ್ಟ್ ಕಾಮೂ

---

## ಯಜ್ಞಸೇನನು ಅಗ್ನಿ ಮಿತ್ರನಿಗೆ ಬರೆದ ಪತ್ರ ಭಾಗ

ಮೌರ್ಯಮಂತ್ರಿಯಾದ ನನ್ನ ಭಾವನನ್ನು
ನೀನು ಸೆರೆಯಿಂದ ಬಿಡುಗಡೆ ಮಾಡಿದರೆ
ನಾನೂ ಮಾಧವಸೇನನನ್ನು ಕೂಡಲೇ
ಬಂಧನದಿಂದ ಬಿಡುಗಡೆ ಮಾಡುವೆನು

(ಕಾಳಿದಾಸನ ಮಾಲವಿಕಾಗ್ನಿ ಮಿತ್ರ)

## ಬೈರನ್–ಟೆರೆಸಾಗೆ

ಅನು : ಎಚ್. ವಿ. ರಾಮಚಂದ್ರರಾವ್

ಬೊಲೊಗನಾ, ಆಗಸ್ಟ್ 25, 1919

ನನ್ನ ಅತಿ ನಲುಮೆಯ ಟೆರೆಸಾ,

ನಾನು ನಿನ್ನ ಹೂ ತೋಟದಲ್ಲಿ ಒಂದು ಪುಸ್ತಕವನ್ನು ಓದಿದ್ದೆ. ನನ್ನ ಒಲುವೇ, ನೀನು ಆಗ ಅಲ್ಲಿರಲಿಲ್ಲ. ನೀನು ಅಲ್ಲಿದ್ದಿದ್ದರೆ ನನಗೆ ಅದನ್ನು ಓದುವುದಾಗುತ್ತಿರಲಿಲ್ಲ. ಆ ಪುಸ್ತಕ ನಿನಗೆ ಬಹುವಾಗಿ ಹಿಡಿಸಿತ್ತು, ಹಾಗೆಯೇ ಅದನ್ನು ಬರೆದವನು ನನ್ನ ಗೆಳೆಯ. ನೀನು ನನ್ನ ಈ ಇಂಗ್ಲೀಷ್ ಪದಗಳನ್ನು ಅರ್ಥಮಾಡಿಕೊಳ್ಳಲಾರೆ; ಅಂತೆಯೇ ಬೇರೆಯವರಿಗೂ ಇದು ಅರ್ಥವಾಗುವುದಿಲ್ಲ. ಎಂತಲೇ ನಾನು 'ಇಟಾಲವಿ' ಭಾಷೆಯಲ್ಲಿ ಬರೆದಿಲ್ಲ. ನಿನ್ನನ್ನು ಮನಸಾರ ಪ್ರೇಮಿಸಿದವನು ಬರೆದದ್ದನ್ನು ನೀನು ಗುರ್ತಿಸಬಲ್ಲೆಯಾದರೆ! ಅವನು ನಿನ್ನ ಪುಸ್ತಕವನ್ನು ನಿನ್ನಲ್ಲಿ ಅವನಿಟ್ಟಿರುವ ಪ್ರೇಮ ಭಾವದ ಕಾರಣದಿಂದಷ್ಟೇ ಓದಿದ್ದಾನೆ ಎಂದು ಅರಿತು ಅವನನ್ನು ಪೂಜಿಸುವೆ.

ನನ್ನ ಅಸ್ತಿತ್ವ ನಿನ್ನ ನಲುವಾಗಿ ಅಷ್ಟೇ, ಅಂದುಕೊಂಡಿದ್ದೇನೆ. ನೀನು ಏನೇ ತೀರ್ಮಾನ ಕೈಗೊಂಡರೂ ಅದು ನನಗೆ ಮಾನ್ಯವೇ. ಏಕೆಂದರೆ ನೀನು ಹದಿನೆಂಟರ ಹರೆಯದವಳು: ಅಲ್ಲದೆ ಕಾನ್ವೆಂಟಿಗೆ ಸೇರಿದವಳು. ನೀನು ಜೀವನಪರ್ಯಂತ ಕಾನ್ವೆಂಟಿನಲ್ಲಿ ಇರುವಂತೆ ಆಗಿದ್ದರೆ! ಹಾಗಿಲ್ಲ. ವಿವಾಹವಾದ ಸ್ಥಿತಿಯಲ್ಲಿ ನಮ್ಮ ಭೇಟಿಯಾಗದೆ ಇರುವಂತೆ ಆಗಿದ್ದರೆ – ಎಷ್ಟು ಚೆನ್ನಾಗಿರುತ್ತಿತ್ತು.

ಆದರೆ ಈಗ ಮಿಂಚಿಹೋಗಿದೆ. ನಾನು ನಿನ್ನನ್ನು ಪ್ರೀತಿಸುತ್ತೇನೆ. ನಿನಗೂ ಅಷ್ಟೇ – ನೀನಂ ಹೇಳುವಂತೆ ನನ್ನ ಬಗ್ಗೆ ಗಾಢವಾದ ಸಹಾನುಭೂತಿ-ಅಭಿವ್ಯಕ್ತಿ ಮಾಡುತ್ತೀಯ.

ಎಂದಾದರೂ ಒಮ್ಮೊಮ್ಮೆ ನನ್ನನ್ನು ನೆನಪಿಸಿಕೋ. ಈ ಬೆಟ್ಟಗಳು, ಈ ಸಮುದ್ರ ನಮ್ಮನ್ನು ದೂರ ಮಾಡಿವೆ. ಆದರೆ ಈ ದೂರ ನೀನಂ ಬಯಸುವ ವರೆಗಷ್ಟೇ —

ನಿನ್ನವ
ಬೈರನ್

---

## ಪುಷ್ಪಮಿತ್ರನು ತನ್ನ ಮಗ ಅಗ್ನಿಮಿತ್ರನಿಗೆ ಬರೆದ ಪತ್ರ ಭಾಗ

ಈಗ ನಾನು ಅಂಶುಮಂತನಿಂದ ಸಗರನು ಹೇಗೋ ಹಾಗೇ ನನ್ನ ಪೌತ್ರನು ರಕ್ಷಿಸಿ ಹಿಂದಕ್ಕೆ ತಂದ ಅಶ್ವದಿಂದ ರಾಜಸೂಯ ಯಾಗವನ್ನು ಮಾಡುತ್ತಿದ್ದೇನೆ. ಆದ್ದರಿಂದ ನೀನು ತಡಮಾಡದೆ ಮನಸ್ಸಿನಲ್ಲಿ ರೋಷ ತಾಳದೆ ವಧೂಜನ ಸಮೇತನಾಗಿ ಯಜ್ಞಸೇವೆಗೆ ಬರಬೇಕು.

(ಕಾಳಿದಾಸನ ಮಾಲವಿಕಾಗ್ನಿಮಿತ್ರ)
ಅನು : ಎಸ್. ವಿ. ಪರಮೇಶ್ವರ ಭಟ್ಟ

# ನೇಮಿಚಂದ್ರ ಜೈನ್ ಅವರ ಪತ್ರ ಕವಿತೆ

ಅನು : ಎಂ. ಎಸ್. ವ್ಯಾಸರಾವ್

ಇಂದು ಬಂದಿದೆ ಗೆಳೆಯ ನಿನ್ನ ಪತ್ರ
ಎಷ್ಟು ದಿನಗಳ ನಂತರ
ನನ್ನೊಳಗೆ ಸೆರೆಯಾಗಿದ್ದ ಆಸೆಗಳಿಗೆ
ರೆಕ್ಕೆ ಮೂಡಿದೆ ಬಲ್ಲೆಯಾ
ಎಲುಬು ಗೋಡೆಗಳ ನಡುವೆ
ಜೀವರಸ ಉಕ್ಕಿ, ಕಾರ್ಗತ್ತಲೆ ಸೀಳಿ
ತೂರಿ ಬಂದಿದೆ ಕಿರಣ
ಅಪರೂಪದ ಬೆಳಕಿನಾವರಣ

ಕಾಯಬೇಕಾಗಿತ್ತೆ ಇಷ್ಟು ದಿನ ಶಬರಿ ಹಾಗೆ
ಪ್ರತಿಕ್ಷಣವು ಸತ್ತು ಮರುಹುಟ್ಟು ಪಡೆದ ಹಾಗೆ
ತಿದಿ ಒತ್ತುವ ಬೇಗೆ
ಹೇಳು ಗೆಳೆಯ
ಮೂಕ ವೇದನೆಗೆ ಮಾತು ಉಂಟೆ ?

ನಾವು ಒಂದೇ ನದಿಯಂತೆ ಸಾಗಿದವರು
ಒಟ್ಟೊಟ್ಟಿಗೆ ಬೆಚ್ಚಗಿನ ಪ್ರೀತಿ ಉಕ್ಕಿಸಿ ಹರಿದವರು
ಯಾವ ಗುಡ್ಡವದು ? ನಮಗೆ ಅಡ್ಡವಾದದ್ದು ?

ಒಂದಾದವರು ಎರಡಾಗಿ ಸೀಳಿ ಗುಡ್ಡದಾಚೀಚೆ
ತಬ್ಬಲಿಗಳಂತೆ ಬೇರಾದೆವು
ನಮಗೊಗ್ಗದ ಹಾದಿಯಲ್ಲೇ ಇದುವರೆಗೂ ಸಾಗಿ
ಹತಾಶರಾದವರಲ್ಲವೆ
ಈ ಪತ್ರವಾದರೂ ಸದ್ಯ ನಮ್ಮನ್ನು ಒಂದು ಮಾಡಿತಲ್ಲ !

ಇಬ್ಬರಿಗೂ ಎಷ್ಟು ಸಾಮ್ಯವಿದೆ
ಕಷ್ಟದಲ್ಲಿ, ನೋವಿನಲ್ಲಿ, ಬಳಸುವ ಪದ ಪುಂಜದಲ್ಲಿ ?
ನನ್ನ ಒಳತೋಟಿಯ ಮಾತುಗಳನ್ನೇ
ಸಮರ್ಥಿಸಿವೆ ನಿನ್ನ ಪತ್ರ ಕೂಡ

ಇರಬಹುದು ನಮ್ಮ ಬದುಕಿನ ರೀತಿಯೆ ಬೇರೆ
ದಿಕ್ಕುಗಳೇ ಬೇರೆ. ನಮ್ಮ ನೆಲೆಗಳೆ ಬೇರೆ ಬೇರೆ ದ್ವೀಪ
ಅವೆಲ್ಲ ನಮ್ಮ ನಮ್ಮ ಸಂಸಾರಕ್ಕೆ ಸಂಬಂಧಿಸಿದ್ದು

ಆದರೆ ಗೆಳೆಯ
ಯಾವುದೋ ಮೌನಗೀತೆ
ಹೃದಯಾಂತರಾಳದಿಂದ ಪುಟಿದೆದ್ದು ನಮ್ಮಿಬ್ಬರನ್ನೂ
ಆವರಿಸುವುದಲ್ಲ ಅಷ್ಟೆ ಸಾಕು

ಹಿಮಪರ್ವತದ ಪದರಪದರದ ಕೆಳಗೆ
ಹರಿಯುವ ಝರಿಯ ಹಾಗೆ
ಒರಟು ಎಲೆಗಳ ಮೇಲೆ ಇಬ್ಬನಿ ಬಳಕುವ ಹಾಗೆ
ಒಂದು ಕ್ಷಣಕ್ಕಾದರೂ ನನ್ನನ್ನು ಮರೆಯುವಂತೆ
ಸೆರೆ ಹಿಡಿಯಿತಲ್ಲ ಈ ನಿನ್ನ ಪತ್ರ
ಇಗೋ ನಿನಗೆ ವಂದನೆ ಗೆಳೆಯ

# ಇತ್ತೀಚಿನ ಮರಾಠಿ ಕಾವ

ಚಂದ್ರಕಾಂತ ಪೋಕಳೆ

ಮರಾಠಿ ಸಾಹಿತ್ಯಕ್ಕೆ ಒಂದು ಸಾವಿರ ವರ್ಷದ ಇತಿಹಾಸವಿದೆ. ಮುಕುಂದ ರಾಜು ವಿರಚಿತ 'ವಿವೇಕಸಿಂಧು' ಎಂಬ ಕೃತಿ ಮರಾಠಿಯ ಪ್ರಥಮ ಗ್ರಂಥ. ಇದರ ಕಾಲ ಸುಮಾರು 1010. ಇದರ ನಂತರ ಚಕ್ರಧರ ಸ್ಥಾಪಿಸಿದ 'ಮಹಾನುಭಾವ ಪಂಥ'ದ ಅನುಯಾಯಿಗಳಿಂದ ಸಾಹಿತ್ಯ ರಚನೆ ಪ್ರಾರಂಭವಾಯಿತು. ಹಾಗೆ ನೋಡಿದರೆ 'ಜ್ಞಾನೇಶ್ವರಿ'ಯಿಂದಲೇ ನಿಜವಾದ ಮರಾಠಿ ಕಾವ್ಯಪರಂಪರೆ ಪ್ರಾರಂಭ ವಾದದ್ದು. ಸಂತ ಜ್ಞಾನೇಶ್ವರ, ನಾಮದೇವ, ಏಕನಾಥ, ತುಕಾರಾಮ, ರಾಮದಾಸ ರಂತಹ ಶ್ರೇಷ್ಠ ಸಂತರಿಂದ ಈ ಭಾಷೆಯ ಕಾವ್ಯ ವಿಪುಲವಾಗಿ ಬೆಳೆಯಿತು. ಸೂಕ್ಷ್ಮ ವೈಯಕ್ತಿಕತೆ, ಸಾಮಾಜಿಕ ವೈಶಾಲ್ಯ, ಉತ್ಕಟ ಭಕ್ತಿರಸ, ನಿರ್ಗುಣೋಪಾಸನೆಗಳ ಸಮನ್ವಯದಿಂದ ಕೂಡಿದ ತೇಜಸ್ವೀ ಮಹಾತ್ಮರಿವರು. ಇವರ ಅಭಂಗದಂತಹ ಕಾವ್ಯದಲ್ಲಿ ಭಕ್ತಿರಸ ತುಂಬಿತುಳುಕುತ್ತಿದೆ. ಈ ಸಂತರ ಕಾವ್ಯ ಗೂಢ, ಗಂಭೀರ. ಇವರ ಕಾವ್ಯದ ಯಶಸ್ಸಿಗೆ ನೇರ ಅಭಿವ್ಯಕ್ತಿಯೇ ಮೂಲ ಕಾರಣ. ಈ ಸಂತರೇ ಇಂದಿನ ಸಮೃದ್ಧ ಮರಾಠಿ ಕಾವ್ಯಪ್ರಪಂಚಕ್ಕೆ ಬೀಜರೂಪ. ಸಂತವಾಙ್ಮಯದಲ್ಲಿ, ದೈವೀ ಒಲವು, ಸೃಷ್ಟಿಯ ಜ್ಞಾನ, ಜೀವನ ಸ್ವರೂಪದ ಜಿಜ್ಞಾಸೆ, ಆತ್ಮಸಾಕ್ಷಾತ್ಕಾರ ವ್ಯಕ್ತವಾಗುವ ಆಶಯಗಳು. ಸಂತವಾಙ್ಮಯದ ನಂತರ ಪಂಡಿತಿ ಹಾಗೂ ಶಾಹೀರ ಪರಂಪರೆ ಪ್ರಾರಂಭವಾಯಿತು. ಲಾವಣಿ, ವೀರಗೀತೆ (ಪವಾಡೆ)ಗಳ ಮುಖಾಂತರ ದೇಶಪ್ರೇಮ ಬಿತ್ತಿದ ಮಹಾನುಭಾವರು ಹಲವರು. ಇದಕ್ಕೆ ಮರಾಠಿ ಕಾವ್ಯದ 'ಪ್ರಭಾತ' ಎಂದು ಕರೆಯಲಾಗುವುದು.

ಆಧುನಿಕ ಮರಾಠಿ ಕಾವ್ಯ ಪ್ರಾರಂಭವಾದದ್ದು 1885ರಲ್ಲಿ. 'ಕೇಶವಸುತ' ಎಂಬ ಶ್ರೇಷ್ಠ ಕವಿ ಕಾವ್ಯವನ್ನು ಸಮಾಜಾಭಿಮುಖವನ್ನಾಗಿಸಿದರು. ಮರಾಠಿಯ ಕಾವ್ಯದ ಹೊಸ ಪ್ರವೃತ್ತಿಗೆ, ಅಭಿವ್ಯಕ್ತಿಗೆ ಕೇಶವಸುತ ಹೊಸ ತಿರುವು ನೀಡಿದ ಅಗ್ರಗಣ್ಯ ಕವಿ. ಇದರಿಂದ ಮರಾಠಿ ಕಾವ್ಯ ಮತ್ತಷ್ಟು ಸಮೃದ್ಧವಾಯಿತು. ಈ ಕವಿ ಸಮಾಜ ಹಾಗೂ ಕಾವ್ಯಪ್ರಪಂಚದಲ್ಲಿ ಕ್ರಾಂತಿ ಮಾಡಿದ ಪರಿಣಾಮವಾಗಿ ನಂತರದ ಮರಾಠಿ ಕವಿಗಳ ಮೇಲೆ ಕೇಶವಸುತರ ಪ್ರಭಾವ ದಟ್ಟವಾಗಿ ಬಿತ್ತು. ಕಾವ್ಯಮಾರ್ಗ ಮುಕ್ತವಾಯಿತು. ಉತ್ಕಟತೆ, ಭಾವ ತೀವ್ರತೆ, ಪ್ರತಿಮಾವಿಧಾನವೇ ಕೇಶವಸುತರ ಕಾವ್ಯದ ಮುಖ್ಯಲಕ್ಷಣ.

ಸಂತವಾಙ್ಮಯ, ಅಭಂಗದ ಪ್ರೇರಣೆಯಿಂದ ರೂಪಗೊಂಡ ಕವಿ - 'ಬೋರಕರ'. ಅಧ್ಯಾತ್ಮ, ನಿಸರ್ಗ ಸೌಂದರ್ಯ, ದೈವೀಶ್ರದ್ಧೆ, ಪೌರಾಣಿಕ ಪ್ರತಿಮೆ – ಇವೇ ಇವರ ಕಾವ್ಯದ ಜೀವಾಳ. ಕೇಶವಸುತರ ಸಂಪ್ರದಾಯದಲ್ಲಿ ಬೆಳೆದ ಇನ್ನಿಬ್ಬರು ಕವಿಗಳೆಂದರೆ 'ಗೋವಿಂದಾಗ್ರಜ' ಮತ್ತು 'ಬಾಲಕವಿ'. ಬಾಲಕವಿಯ ನಿಸರ್ಗ ಕಾವ್ಯ ತುಂಬಾ ಪ್ರಸಿದ್ಧ.

ಮರಾಠಿ ಕಾವ್ಯದ ಹೊಸ ಆಯಾಮಗಳನ್ನೆಲ್ಲ ತನ್ನಲ್ಲಿ ಅರಗಿಸಿಕೊಂಡು ಸಾಕಷ್ಟು ಎತ್ತರಕ್ಕೆ ಬೆಳೆದ ಕವಿ 'ಕುಸುಮಾಗ್ರಜ'. ಈತ ಜ್ಞಾನಪೀಠ ಪ್ರಶಸ್ತಿ ವಿಜೇತ ಕವಿ. ಮರಾಠಿ ಕಾವ್ಯದ ಬದಲಾವಣೆಯೊಂದಿಗೆ, ಇವರ ಕಾವ್ಯವೂ ಅರಳಿ ಬಹುಮುಖಿ ಪಡೆದದ್ದು ಗಮನಾರ್ಹ. 'ಹಿಮರೇಷಾ' ಈ ಕವಿಯ ಮಹತ್ವಾಕಾಂಕ್ಷೆಯ ಕಾವ್ಯಸಂಗ್ರಹ.

1920 ರಿಂದ 1940ರ ವರೆಗಿನ ಕಾಲಾವಧಿಯಲ್ಲಿ ಪುಣೆಯ 'ರವಿಕಿರಣ ಮಿತ್ರ ಮಂಡಳಿ'ಯು ಹುಟ್ಟಿಕೊಂಡಿತು. ಇದರಲ್ಲಿ ಬೇಂದ್ರೆಯವರ 'ಗೆಳೆಯರ ಗುಂಪಿ'ನಂತೆ ಒಂದೆಡೆ ಸೇರಿದ ಗೆಳೆಯರು ಕಾವ್ಯದ ಚರ್ಚೆ, ವಿಮರ್ಶೆ, ಬರವಣಿಗೆಯಲ್ಲಿ ತೊಡಗಿ ಮರಾಠಿ ಕಾವ್ಯಕ್ಕೆ ಹೊಸ ತಿರುವು ನೀಡಲು ಪ್ರಯತ್ನಿಸಿದರು. ಯಶವಂತ, ಗಿರೀಶ, ಮಾಧವ ಜೂಲಿಯನ್, ವಿ. ದ. ಘಾಟೆಯಂಥ ಪ್ರಮುಖ ಕವಿಗಳು ಈ ಗುಂಪಿನ ನೇತೃತ್ವ ವಹಿಸಿದರು.

ಎರಡನೆಯ ಮಹಾಯುದ್ಧದ ನಂತರ ಬಂದ 'ಮರ್ಡೇಕರ' ಎಂಬ ಅಗ್ರಗಣ್ಯ ಕವಿ ಮರಾಠಿ ಕಾವ್ಯಮಾರ್ಗದ ಇನ್ನೊಂದು ಮಹತ್ವಪೂರ್ಣ ಮೈಲಿಗಲ್ಲು. ಕೇಶವಸುತರ ಕಾಲದಲ್ಲಿ ಈ ಭಾಷೆಯ ಕಾವ್ಯ ಹೇಗೆ ಹೊಸ ತಿರುವು ಪಡೆದಿತ್ತೋ ಅದಕ್ಕಿಂತಲೂ ವಿಭಿನ್ನ ಮತ್ತು ವಿಶಿಷ್ಟವಾದ ರೀತಿಯಲ್ಲಿ ತಿರುವು ಪಡೆಯಲು ಮರ್ಡೇಕರರ ಕಾವ್ಯ ಸಹಕರಿಸಿತು. ಪರಂಪರೆಯ ಗರ್ಭದಿಂದ ಹೊರಹೊಮ್ಮಿದ ರಾಮದಾಸರ ರಚನೆ ; ಕೇವಲ ಪ್ರತಿಮಾಲೋಕದಲ್ಲಿ ವಿಹರಿಸುವ ಬಾಲಕವಿಯ ಸಂವೇದನಾಶೀಲ ಅನುಭವ ; ಭಾಷೆ, ಶೈಲಿಯಲ್ಲಿ ವಿಶಿಷ್ಟ ಚಮತ್ಕಾರ ಸಾಧಿಸಿದ ಮಾಧವ ಜೂಲಿಯನ್ ; ಹಳೆಯದನ್ನು ವಿಧ್ವಂಸಗೊಳಿಸಿ ಹೊಸದರ ನಿರ್ಮಾಣಮಾಡುವ ಕೇಶವ

ಸುತರ ನಾವೀನ್ಯಪೂರ್ಣ ರಚನೆ – ಇಂಥ ಎಷ್ಟೋ ಕವಿಗಳ ಸಂಸ್ಕಾರ ಮರ್ಡೇಕರರ ಕಾವ್ಯಕ್ಕೆ ದೊರಕಿದೆ. ಹೀಗಾಗಿ ವಸ್ತು, ಆಶಯ, ತಂತ್ರ, ಅಭಿವ್ಯಕ್ತಿಯಲ್ಲಿ ದಿಟ್ಟತನ ತೋರಿಸಿ ಅವರೊಂದು ಕ್ರಾಂತಿಯನ್ನೇ ಮಾಡಿದರು. ಇವರ ಕಾವ್ಯದ ಮೇಲೆ ಯಂತ್ರ ಯುಗದ ಪ್ರಭಾವ ದಟ್ಟವಾಗಿ ಬಿತ್ತು.

'ವಿಂದಾ ಕರಂದಿಕರ' ಮರ್ಡೇಕರರ ಕಾವ್ಯಪರಂಪರೆಯಲ್ಲಿ ಬೆಳೆದ ಕವಿ. ಇವರದು ಮೂವತ್ತು ವರ್ಷಗಳ ಕಾವ್ಯಪ್ರವಾಸ. ಕ್ರಾಂತಿಕಾರೀ ಮಾರ್ಗದ ಕವಿ. ಜೀವನವನ್ನು ಮನಸ್ವೀ ಎದುರಿಸುವ ದಿಟ್ಟತನ ತೋರಿಸಿದ್ದರಿಂದ ಕಾವ್ಯದ ಆಶಯ, ರಚನೆ, ತಂತ್ರ, ಬಂಡುಕೋರ ಪ್ರವೃತ್ತಿಯಿಂದಾಗಿ ನವ್ಯಕಾವ್ಯ ಹುಟ್ಟಲು ಕಾರಣ ವಾಯಿತು. ಇವರದು ಪರೀಕ್ಷೆಗೊಡ್ಡುವಂಥ, ಪರಂಪರೆಗೆ ಧಕ್ಕೆಕೊಡುವಂಥ ಚಿಂತನ ಶೀಲ ಕಾವ್ಯ - ವಿಚಿತ್ರ ಅಷ್ಟೇ ವಿಕ್ಷಿಪ್ತ ಭಾಷಾಶೈಲಿ. 'ಸ್ವೇದಗಂಗಾ', 'ಮೃದಗಂಗಾ' 'ದ್ರುಪದ', 'ಜಾತಕ' - ಇವರ ಪ್ರಮುಖ ಕಾವ್ಯ ಸಂಗ್ರಹಗಳು.

'ಅನಿಲ' - ರವಿಕಿರಣ ಮಂಡಳಿಯ ಸಮಕಾಲೀನ ಕವಿ. ವೈಶಿಷ್ಟ್ಯಪೂರ್ಣ ಕಾವ್ಯ ರಚಕ; ಮುಕ್ತ ಛಂದಸ್ಸಿನ ಪ್ರವರ್ತಕ. ಅನಿಲರ ಕಾವ್ಯವೆಂದರೆ ಉತ್ಕಟತೆಯ ಪರಾಕಾಷ್ಠೆ. ಈತ ಜೀವನಾನುಭವವನ್ನು ಅರಗಿಸಿಕೊಂಡ ದಿಟ್ಟಕವಿ. ಇವರ ಕಾವ್ಯ ದಲ್ಲಿ ಜೀವನದರ್ಶನ ತುಂಬಿ ತುಳುಕಿದೆ. 'ದಶಪದಿ' ಅನಿಲರ ಮಹತ್ವಪೂರ್ಣ ಕಾವ್ಯ ಸಂಗ್ರಹ. ಬದುಕಿನ ಕಟುತ್ವವನ್ನು ದಿಟ್ಟತನದಿಂದ ಮತ್ತು ಮೂಕವಾಗಿ ಅನುಭವಿಸು ವುದೇ ಅನಿಲರ ಕಾವ್ಯದ ಪ್ರವೃತ್ತಿ.

ನವ್ಯಕಾವ್ಯದ ರಚನೆಯಲ್ಲಿ ಪು. ಶಿ. ರೇಗೆಯವರಿಗೆ ವಿಶಿಷ್ಟ ಸ್ಥಾನವಿದೆ. 'ಗಂಧರೇಖಾ', 'ಪುಷ್ಕಳಾ' - ಈ ಕಾವ್ಯಸಂಗ್ರಹದಲ್ಲಿಯ ಕವಿತೆಗಳಲ್ಲಿ ಮೂಡಿದ ಪ್ರತಿಮಾಸೃಷ್ಟಿ ಅಗಾಧವಾದುದು. ಅವರದು ಸ್ತ್ರೀ ರೂಪದಲ್ಲಿ ಹೊರಹೊಮ್ಮುವ ಸೃಜನಸೃಷ್ಟಿ. ನಿಸರ್ಗ, ಸ್ತ್ರೀ ಹಾಗೂ ಶಾರೀರಿಕ ಆಕರ್ಷಣೆಗೆ ಅವರು ತೊಡಿಸುವ ಪ್ರತಿಮೆ ಅಪ್ರತಿಮ. ಅವರ ಕವಿತೆ ಹೆಚ್ಚು ಹೆಚ್ಚು ಅಂತರ್ಮುಖಿ. ಇದೇ ಕಾಲದಲ್ಲಿ ಬರುವ ಇನ್ನೊರ್ವ ಕವಿ ಎಂದರೆ 'ವಸಂತ ಬಾಪಟ'. ಇವರ ಕಾವ್ಯ ಹಳೇ-ಹೊಸದರ ಸಮನ್ವಯ. ಹಳೇ ಪರಂಪರೆಗೆ ಅವರು ನೀಡಿದ ನಾವೀನ್ಯಪೂರ್ಣ ಆವಿಷ್ಕಾರ ಅಪೂರ್ವವಾದುದು. ಬಾಪಟರವರ ಕಾವ್ಯ ಕಾಲು ದಶಕದ್ದು. ಇದು ಕ್ರಾಂತಿಯ ಅರಿವು, ನಾದ, ಲಯ, ಗೇಯಂತೆ, ಸೌಂದರ್ಯದ ಆಸ್ವಾದನೆ ಗಳಿಸುವಲ್ಲಿ, ಬೆಳೆಸುವಲ್ಲಿ ದಿಟ್ಟ ಹೆಜ್ಜೆಯನ್ನಿಟ್ಟಿತು. ಇದೇ ರೀತಿಯ ದಿಟ್ಟ ಕಾವ್ಯಗಳನ್ನು ಬರೆದ ಇನ್ನೊರ್ವ ಸಮಕಾಲೀನ ಕವಿ ಎಂದರೆ 'ಮಂಗೇಶ ಪಾಡಗಾಂವಕರ'. ಇವರು ಭಾವಗೀತೆ ಪೇರಳ ವಾಗಿ ಬರೆದಿದ್ದಾರೆ.

ಆಧುನಿಕ ಮರಾಠಿ ಕಾವ್ಯಪರಂಪರೆಯನ್ನು ಅರ್ಥಮಾಡಿಕೊಳ್ಳಲು ಇಷ್ಟು ಹಿನ್ನೆಲೆ ಸಾಕೆಂದು ಭಾವಿಸುತ್ತೇನೆ.

ಪ್ರಸ್ತುತ ಲೇಖನ ಇತ್ತೀಚಿನ ಮರಾಠಿ ಕಾವ್ಯಕ್ಕೆ ಸಂಬಂಧಪಟ್ಟದ್ದು. ಇಲ್ಲಿ

1975 ರಿಂದ 85ರೊಳಗಿನ ಕವಿತೆಗಳನ್ನು ಗಮನಿಸಿ ನಾನು ಆಯ್ಕೆ ಮಾಡಿ ಓದಿದ ಇಪ್ಪತ್ತೈದು ಕವಿಗಳ ಕಾವ್ಯದ ಹಿನ್ನೆಲೆಯಲ್ಲಿ ಈ ಲೇಖನ ಸಿದ್ಧಪಡಿಸಿದ್ದೇನೆ. ನನ್ನ ಗಮನಕ್ಕೆ ಬರದೇ ಇದ್ದ ಕವಿಗಳು. ಅವರ ಉತ್ತಮ ಕವಿತೆಗಳು ಇರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಆದರೂ ಈ ಲೇಖನದಲ್ಲಿ ಇತ್ತೀಚಿನ ಒಟ್ಟು 'ಕಾವ್ಯ ಧೋರಣೆ'ಯನ್ನು ಗುರುತಿಸುವ ಪ್ರಯತ್ನ ಮಾಡಿದ್ದೇನೆ.

ಈ ದಶಕದ ಕವಿಗಳು ವ್ಯಕ್ತಿ ಮತ್ತು ಸಮಾಜದ ನಡುವಣ ಸಂಬಂಧ ಮತ್ತು ತೊಡಕಾದ ಜಟಿಲಸಮಸ್ಯೆಗಳನ್ನು ಅರಿಯುವ ತನ್ಮೂಲಕ ಕಾವ್ಯದಲ್ಲಿ ತೋಡಿಕೊಳ್ಳುವ ಪ್ರಯತ್ನ ಮಾಡಿರುವುದು ಗಮನಾರ್ಹ. ಎಪ್ಪತ್ತರ ದಶಕದ ಕಾವ್ಯಗಳಲ್ಲಿ ಪ್ರತಿಮೆಯ ಪ್ರಯೋಗ ತುಂಬಾ ವ್ಯಾಪಕವಾಗಿ ನಡೆಯಿತು. ದಿಲೀಪ ಚಿತ್ರೆ, ಗ್ರೇಸ್, ಡಹಾಕೆಯಂಥವರ ಕವಿತೆಗಳು ಪ್ರತಿಮೆಯ ಹೊರೆಯಿಂದ ತುಂಬಾ ಕ್ಲಿಷ್ಟ ಕಾವ್ಯವೆನಿಸಿತು.

ಬಿಳಿ ಶುಭ್ರ ಆನೆಗಳ
ಗುಂಪು ಅರಣ್ಯದೊಳಗೆ ಹೊರಟಿತು.
ದಟ್ಟವಾದ ಶೋಕ ಗ್ರಸ್ತ
ಗಿಡದೊಳಗೆ ಸೇರಿ ಒಂದಾಯಿತು.
(ಗ್ರೇಸ್)

ಆಗ ಸ್ವರ್ಗದ ಕಬ್ಬಿಣದ ಚಕ್ರಾಕಾರ ಮೆಟ್ಟಿಲು
ಸಿಕ್ಕು ಸಿಕ್ಕಾದ ಆರ್ಕಿಟೆಕ್ಚರಿನ ಅರಿವಾಗುತ್ತದೆ.
ಆತನಿಗೆ ಮೊಟ್ಟ ಮೊದಲು ಅರ್ಥವಾಗುತ್ತದೆ
ದೇವರ ಅವಮಾನದ ಬೇಸರ ಮತ್ತು ಬೂಟಿನ ಅಳತೆ
ಹಾಗೂ ಆತನ ಕಾಲಿನ ಭಾರ. (ದಿಲೀಪ ಚಿತ್ರೆ)

ಪರಿಣಾಮ ಕವಿ ಮತ್ತು ಸಹೃದಯರ ನಡುವೆ ಕಂದಕವೇರ್ಪಟ್ಟಿತು. ಕವಿತೆ ಜನಸಾಮಾನ್ಯರಿಂದ ದೂರವಾಗಲು ಇದು ಮೂಲಕಾರಣವೂ ಆಯಿತು.

ಕವಿಯಾದವನು ವಿವಿಧ ಪಾತಳಿಯ ಅನುಭವ ಪಡೆದು, ಆ ಶಕ್ತಿಯ ಮೂಲಕ ಹೊಸ ಬಗೆಯ ಭಾಷಾ ಪ್ರಯೋಗ ನಡೆಸಿದಾಗ ಆ ಕವಿ ಮತ್ತು ಆತನ ಕಾವ್ಯ ಸಾರ್ವಕಾಲಿಕವಾಗುತ್ತದೆ ಎಂಬುದು ಈ ಕವಿಗಳಿಗೆ ಮನವರಿಕೆಯಾಯಿತು. ಈ ಅರಿವು ಇದ್ದ ಕವಿಗಳ ಕಾವ್ಯ ಏಕತಾನತೆಯ ಹಿಡುಗಿಗೆ ಬಲಿಯಾಗದೆ ಪಾರಾಯಿತು. ಇಂದಿನ ಸಮಾಜ ಜೀವನದ ಆಳವಾದ ಅರಿವು ಮತ್ತು ಉತ್ಕಟತೆ ಇವುಗಳ ಸಮಿಾಕರಣವೇ ಇಂದಿನ ಕಾವ್ಯ. ಆಧುನಿಕ ಮರಾಠಿ ಕಾವ್ಯದ ಜೇಷ್ಠ ಕವಿಗಳಾದ ವಿಂದಾ ಕರಂದಿ

ಕರ, ಮಂಗೇಶ ಪಾಡಗಾಂವಕರ ಇವರ ಕವಿತೆಗಳಲ್ಲೂ ಈ ಅಂಶ ಇರುವದನ್ನು ಮರೆಯುವ ಹಾಗಿಲ್ಲ.

ಇತ್ತೀಚಿನ ಮರಾಠಿ ಕವಿಗಳು ಕಳೆದ ದಶಕದ ಕವಿಗಳ ಪ್ರಭಾವದಿಂದ ಮುಕ್ತರಾಗಿಲ್ಲ. ದಿಲೀಪ ಚಿತ್ರೆಯುವರ ಪ್ರತೀಕಾತ್ಮಕ ಶೈಲಿಯ ಸಂಸ್ಕಾರ, ಗ್ರೇಸರ ನಿರ್ಲಿಪ್ತ ಧಾಟಿ, ನಾಮದೇವ ಢಸಾಳರ ಬಂಡುಕೋರ ಪ್ರವೃತ್ತಿ ಈಗಿನ ಕಾವ್ಯದಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ನಾರಾಯಣ ಕುಲಕರ್ಣಿ ಕವಠೇಕರ ಇವರ 'ಪಂದ್ಯ' ನೋಡಿ—

ಅಷ್ಟೇನೂ ದೂರ ಹೋಗಿಲ್ಲ
ನಿಮ್ಮ–ನನ್ನ ಹಾದಿ.
ನಾವೊಂದು ಪಂದ್ಯ ಆಡೋಣ ;
ನಮ್ಮ-ನಮ್ಮ ನಾವೆಯಲ್ಲಿ ದಡ ತಲುಪುವ ಆಟ.

ನೀವು ನನ್ನ ನಾವೆಯ ತಳಕ್ಕೆ
ರಂಧ್ರ ಮಾಡುವ ಹಾಗಿಲ್ಲ,
ನಾನು ನಿಮ್ಮ ಹುಟ್ಟು ಕದ್ದೊಯ್ಯುವ ಹಾಗಿಲ್ಲ.
ಪ್ರತಿಜ್ಞೆ ಒಂದೇ : ಕ್ರೀಡಾ ಮನೋಭಾವನೆಯದು.

ಸದ್ಯಕ್ಕೆ : ನಿಮ್ಮ ಕೈಯಲ್ಲಿ ಸುಟ್ಟ ಹೂಗಳು,
ನನ್ನ ಬೊಗಸೆಯಲ್ಲಿ ಹೊತ್ತಿದ ಚಿಗುರು.

ಇತ್ತೀಚಿನ ಕವಿತೆಗಳು ತೊಡಕಾದ ಅನುಭವಗಳ ಮೂಸೆಯಲ್ಲಿ ಬೆಳೆದ ಭಾವನೆ ಮೂಡಿಸುತ್ತವೆ. ಈ ಕವಿತೆಗಳು ಮರ್ಡೇಕರ, ಪು.ಶಿ. ರೇಗೆಯುವರ ಕವಿತೆಗಳಿಗೆ ತುಂಬಾ ಹತ್ತಿರದಲ್ಲಿದ್ದ ಹಾಗಿವೆ. ಪು.ಶಿ. ರೇಗೆ ತಮ್ಮ ಕವಿತೆಗಳಲ್ಲಿ ಶಬ್ದ ಸಂವೇದನೆ, ಶಬ್ದ ಪ್ರತಿಮೆಯನ್ನು ವಿವಿಧ ರೀತಿಯಲ್ಲಿ ಜೋಡಿಸಿ, ಅಭಿವ್ಯಕ್ತಗೊಳಿಸುತ್ತಿದ್ದರು. ಇದೇ ರೀತಿಯ ಅಭಿವ್ಯಕ್ತಿ ಮಾಧ್ಯಮವನ್ನು ಇಂದಿನ ಕವಿಗಳು ಹಸ್ತಗತ ಮಾಡಿಕೊಂಡಿದ್ದಾರೆ. ಹೀಗಾಗಿ ಇವರ ರಚನೆ ಮುಕ್ತ ಮಾರ್ಗ ಹಿಡಿಯಿತು. ರೇಗೆಯುವರ ಕಾವ್ಯದಲ್ಲಿದ್ದ ಸಾಮಾಜಿಕ ಅರಿವಿನ ಅಭಾವ, ಕವಠೇಕರರಂತಹ ಕವಿಗಳು ನಿವಾರಣೆ ಮಾಡಿಕೊಂಡಿದ್ದು ವಿಶೇಷ. ಇಷ್ಟಾಗಿಯೂ ಕೂಡ ಕ್ಲಿಷ್ಟ ಪ್ರತಿಮೆಗಳ ಬಳಕೆಯಿಂದ ಕವಿತೆಗಳ ಆಶಯ ಅತ್ಯಂತ ಸೂಕ್ಷ್ಮ. ಅಸ್ಪಷ್ಟವಾಯಿತು. ಆಧುನಿಕ ಕವಿತೆಗಳಿಗೆ ಮರ್ಡೇಕರರಂತಹ ಹಿರಿಯ ಕವಿಗಳಿಂದ ಸಾಕಷ್ಟು ಚೈತನ್ಯ ಹಾಗೂ ಚಾಲನೆ ಸಿಕ್ಕಿತು. ವಿಂದಾ ಕರಂದಿಕರರ ಸಾಮಾಜಿಕ ಅರಿವಿನ ಕವಿತೆಗಳ; ಮಂಗೇಶ ಪಾಡಗಾಂವಕರರ ಕವಿತೆಯೊಳಗಿನ ಸಾಮಾಜಿಕ, ರಾಜಕೀಯ ಉಪಹಾಸದ-ಆವಿಷ್ಕಾರದ ಪ್ರಭಾವ ಇತ್ತೀಚಿನ ಕವಿತೆಗಳ ಮೇಲೆ ನಿಶ್ಚಿತವಾಗಿ ಮೂಡಿದೆ.

ಈ ಕವಿಗಳು ಸಾಮಾಜಿಕ ಅನುಭವವನ್ನು ಸಹಜವಾಗಿ ಅಭಿವ್ಯಕ್ತಿಗೊಳಿಸುತ್ತಾರೆ. ಆದರೆ ಪುರೋಗಾಮಿ ಮತ್ತು ದಲಿತ ಕಾವ್ಯವು ಕ್ರಾಂತಿಯ ಉನ್ಮತ್ತ ಕಲ್ಪನೆಯಿಂದ ಜನಸಾಮಾನ್ಯರ ತಿಳವಳಿಕೆಯ ಪಾತಳಿಗಿಂತ ಮೇಲ್ಮಟ್ಟದಲ್ಲಿ ರಚಿಸಲ್ಪಡುತ್ತದೆ. ಈ ಕಾವ್ಯದಲ್ಲಿ ಕನಸಿನ 'ರೊಮ್ಯಾಂಟಿಕ್' ಕಲ್ಪನೆ ಹುಟ್ಟಿಕೊಳ್ಳುತ್ತದೆ. ಹೀಗಾಗಿ ಕವಿಯ ತಲೆಯೊಳಗಷ್ಟೇ ಕ್ರಾಂತಿ, ಸುತ್ತಲೆಲ್ಲ ಸ್ತಬ್ಧ. ಆದರೆ ಇತ್ತೀಚಿನ ಮರಾಠಿ ಕಾವ್ಯ ಸಾಮಾಜಿಕ ಅರಿವಿನಿಂದ ಕೂಡಿದೆ. ಅಲ್ಲದೆ ಇಲ್ಲಿ ಬಳಸಿದ ಕಾವ್ಯಾತ್ಮಕ ಪ್ರತೀಕಗಳು ಜನ ಸಾಮಾನ್ಯರಿಗೂ ಅರ್ಥವಾಗುವ ರೀತಿಯಲ್ಲಿವೆ. ಜನಸಾಮಾನ್ಯರನ್ನು ತಲುಪುವ ವಾಸ್ತವಿಕ ಶೈಲಿಯನ್ನು ಕವಿಗಳು ಅಳವಡಿಸಿದ್ದೇ ಇದಕ್ಕೆ ಕಾರಣ. ಇಂದಿನ ಸಾಮಾಜಿಕ ರಾಜಕೀಯ ಅರಿವಿನ ಕಾವ್ಯದ ಮೇಲೆ ಉದಾಸೀನ್ಯದ, ಹತಾಶತನದ ನೆರಳು ಪಸರಿಸಿದೆ. ಇಂಥ ಸಾಮಾಜಿಕ ಕಾವ್ಯ ಓದುವಾಗ, ಅವು ಕನಸಿನ ರಮ್ಯಲೋಕದಲ್ಲಿ ವಿಹರಿಸದೆ, ತನ್ನ ಸುತ್ತಲಿನ ವಾಸ್ತವದ ಪ್ರಜ್ಞೆ ಮೂಡಿಸುವುದನ್ನು ಕಾಣಬಹುದು. ಈ ಕವಿಗಳು ಬದುಕನ್ನು ದಿಟ್ಟತನದಿಂದ ವಿವರಿಸಿದ್ದರಿಂದ ಇವರ ಕವಿತೆಗಳುಯಾವುದೇ ಲೇಬಲ್ಲಿಗೆ ಅಂಟಿಕೊಳ್ಳದ, ತಾಜಾತನದಿಂದ ನಳನಳಿಸುವ 'ನಿರೋಗಿ' ಕವಿತೆಗಳಾದವು. ಇವರು ಆಶಾವಾದ ಅಥವಾ ನಿರಾಶಾವಾದದ ಪಡಿಯಚ್ಚಾಗಿರದೆ ಇದ್ದುದು ಗಮನಾರ್ಹ.

ಇತ್ತೀಚಿನ ಕವಿಗಳ ಬಗ್ಗೆ ದಯಾ ಪವಾರ ಎಂಬ ಕವಿಯ ಅಭಿಪ್ರಾಯ ಹೀಗಿದೆ. "ಸ್ವಾತಂತ್ರ್ಯ ಪೂರ್ವ ಕಾಲದಲ್ಲಿ ಹೋರಾಟ, ಮಾನವತಾವಾದ, ಮೌಲ್ಯ ಇವುಗಳ ಬಗೆಗಿನ ಶ್ರದ್ಧೆ, ಇವು ಆಗಿನ ಕಾಲದ ಕವಿಗಳ ಮೇಲೆ ಪರಿಣಾಮ ಬೀರಿತು. ಇತ್ತೀಚಿನ ಕವಿಗಳು ಸ್ವಾತಂತ್ರ್ಯ ಸಿಕ್ಕ ಬಳಿಕ ಜನಿಸಿದರು. ಅಲ್ಲದೆ ಆ ಕಾಲದ ವಿಶಿಷ್ಟ ಬದುಕು ಈಗ ಎಲ್ಲೂ ಕಾಣುತ್ತಿಲ್ಲ. ಹೀಗಾಗಿ ಈ ಕವಿಗಳ ನಿರಾಶೆ ಒಂದು ರೀತಿಯ 'ಪೊಸಿಟಿವ್ ವಾಸ್ತವಿಕತೆ' ಎನ್ನಬಹುದು."

ಬದುಕಿನ ದುರ್ದೆಶೆಯಿಂದಾಗಿ ಮನುಷ್ಯನ ಮನಸ್ಸಿನಲ್ಲಿ ಹುಟ್ಟಿಕೊಂಡ ಭಯ, ವೈಫಲ್ಯ, ನಿರಾಶೆ ಬಗೆಗಿನ ಕವಿತೆಗಳು ಅಪಾರ ಸಂಖ್ಯೆಯಲ್ಲಿ ಹುಟ್ಟಿಕೊಂಡವು. ವಸಂತ ಪಾಟಣಕರ, ರಜನೀ ಪರೂಳೇಕರ, ಶಿ.ಕ್ರ. ಜೋಶಿ ಇಂಥವರ ಕವಿತೆಗಳಲ್ಲಿ ನಿರಾಶೆಯ, ವಿಫಲತೆಯ ದಟ್ಟವಾದ ಛಾಯೆಯನ್ನು ಗುರುತಿಸಬಹುದು.

ವಸಂತ ಪಾಟಣಕರರ ಕವಿತೆಯೊಳಗಿನ ನಿರಾಶೆಯ ಚಿತ್ರನೋಡಿ–

"ದಿನವಿಡೀ ಜಿನುಗಿದ ಅಂಗೈ ಬೆವರು ಅಳಿಸಿಯೂ ಹೋಗುತ್ತಿಲ್ಲ.
ಮುಖದ ಮೇಲೆ ತುಂಬಿ-ತುಳುಕುವ ದೈನ್ಯ-ಕಾರುಣ್ಯ ಕಿತ್ತಿ ತೆಗೆವ ಹಾಗಿಲ್ಲ.
ಮನದೊಳಗಿನ ಅಶಾಂತಿಯ ನೆರಳು ಶತಪಥ ಹಾಕುತ್ತಲೇ ಇದೆ.
ಕೊನೆಗೆ, ಈ ಕತ್ತಲೆಯಲ್ಲಿ ಉಳಿಯುವವು–
ಕೇವಲ ಒಬ್ಬ ಕುಡುಕನ ಹುಡುಕಾಟ ಮತ್ತು
ಕೊಳೆತು ನಾರುತ್ತಿರುವ ತಲೆಯೊಳಗಿಲ್ಲದಸ್ತಿತ್ವ."

ಈ ಕವಿಗಳು ವಿಫಲತೆಯ ಪರಿಣಾಮ, ಇದಕ್ಕೆ ಕಾರಣೀಭೂತವಾದ ರಾಜಕೀಯ-ಸಾಮಾಜಿಕ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳುವ, ಶೋಧಿಸುವ ಗಂಭೀರ ಪ್ರಯತ್ನ ಮಾಡಿದ್ದು ಗಮನಾರ್ಹ.

ಇತ್ತೀಚಿನ ಮರಾಠಿ ಸಾಹಿತ್ಯದ ಮೇಲೆ ಅಸ್ತಿತ್ವವಾದದ ಪರಿಣಾಮ ಕಾಣಬಹುದು ವಸಂತ ಪಾಟಣಕರ ಇವರ ಕವಿತೆಗಳಲ್ಲಿ ಕಾಫ್ಕಾನ out sider ನಾಯಕನ ದೃಷ್ಟಿಕೋನದ–ಪ್ರಭಾವದ ಸುಳಿವು ಸಿಗುತ್ತದೆ. ಪಾಟಣಕರ ಒಬ್ಬ ಅಸ್ತಿತ್ವವಾದೀ ಕವಿ. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಭಾರತೀಯ ಮನಸ್ಸಿನೊಳಗಣ ನೂರಾರು ಆಕಾಂಕ್ಷೆಗಳು ನೆರವೇರದೆ ಇದ್ದುದರಿಂದ, ಸುತ್ತಲಿನ ಸಾಮಾಜಿಕ ಪರಿಸರದಲ್ಲಿ ಒಂದು ರೀತಿಯ ಉದಾಸೀನತೆ, ತಟಸ್ಥ ಹಾಗೂ ಹತಾಶಭಾವನೆ ಹುಟ್ಟಿಕೊಳ್ಳಲಾರಂಭಿಸಿತು. ಈ ಭಾವನೆಯನ್ನು ಮೆಟ್ಟಿನಿಲ್ಲುವ ಹೊಸ ವಿಚಾರ, ಚಳವಳಿ ಇನ್ನೊಂದು ಕಡೆ ಸಾವಕಾಶವಾಗಿ ಮೊಳೆಯಲಾರಂಭಿಸಿತು. ಪರಿಣಾಮ ಕೇಶವಸುತ, ಕುಸುಮಾಗ್ರಜ, ಕರಂದಿಕರ, ಪಾಡಗಾಂವಕರ, ಮುಕ್ತಿಬೋಧ, ನಾರಾಯಣ ಸುರ್ವೇ ಇಂಥವರು ಈ ಹೊಸ ಆವಿಷ್ಕಾರದಿಂದ ಕೂಡಿದ ಕಾವ್ಯ ಬರೆದರು. ಸಾಮಾಜಿಕ ಹತಾಶೆಯನ್ನು ಹೊಡೆದೋಡಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದರು. ಹೊಸ ದನಿಯ ಶಂಖನಾದ ಮೊಳಗಿತು. ಇಂಥ ಸ್ಫೂರ್ತಿದಾಯಕ ಅದಮ್ಯ ದನಿ ಇತ್ತೀಚಿನ ಕವಿತೆಗಳಲ್ಲಿ ಕಂಡು ಬರುತ್ತಿಲ್ಲ. ವಿಜ್ಞಾನಯುಗದಿಂದಾಗಿ ವ್ಯಕ್ತಿ ಮತ್ತು ಸಾಮಾಜಿಕ ಜೀವನದಲ್ಲಿ ಒಂದು ಪ್ರಕಾರದ ವಿಘಟನೆ, ಏಕಾಕಿತನ, ಅರ್ಥ ಶೂನ್ಯತೆ ಕಾಣಿಸಿಕೊಂಡಿತು. ಪರಿಣಾಮ ಬದುಕು ಅಸಂಗತ, ನಿರರ್ಥಕವೆನಿಸಿತು. ಹೀಗಾಗಿ ಹಿಂದಿನ ತಲೆಮಾರಿನ ಕವಿಗಳ ಕಾವ್ಯಗಳಲ್ಲಿದ್ದ ಕಳಕಳಿ, ಸ್ಫೂರ್ತಿ, ದಿಟ್ಟತನದ ಆವಿಷ್ಕಾರ ಈಗಿನ ಕಾವ್ಯದಲ್ಲಿ ಮೂಡಿಬಂದಿಲ್ಲ. ಈ ಕವಿಗಳು ವೈವಿಧ್ಯಮಯವಾದ ಅನುಭವವನ್ನು ಅಭಿವ್ಯಕ್ತಿಗೊಳಿಸಲು ಸಿದ್ಧರಿಲ್ಲ. ಕೇವಲ ಅಸಂಗತ, ಔದಾಸೀನ್ಯತೆ, ಹತಾಶಭಾವನೆಗಷ್ಟೆ ಅಂಟಿಕೊಳ್ಳುತ್ತಾರೆ. ಹೀಗಾಗಿ ಅವರು ಸ್ಫೂರ್ತಿ, ಪ್ರೇರಣೆ, ಅದಮ್ಯ ಉತ್ಸಾಹದಂಥ ಪ್ರವೃತ್ತಿಯಿಂದ ವಂಚಿತರಾದರು.

ಇತ್ತೀಚಿನ ಕಾವ್ಯದ ರಚನೆ, ತಂತ್ರ ಗಮನಿಸಿದಾಗ-ಅವರ ಕಾವ್ಯಗಳು ರೂಪಕ ಇಲ್ಲವೆ ಪ್ರತೀಕಾತ್ಮಕ ರೂಪತೊಟ್ಟು ಅಭಿವ್ಯಕ್ತಗೊಳ್ಳುವದನ್ನು ಕಾಣುತ್ತೇವೆ. ಇವರು "ಕಾವ್ಯದ ನೇರ ಪ್ರತಿಪಾದನೆಯನ್ನು ತಿರಸ್ಕರಿಸುತ್ತಾರೆ. ಇದು ಕಲಾತ್ಮಕ ಅಭಿವ್ಯಕ್ತಿಗೆ ಧಕ್ಕೆ ತರುತ್ತದೆಂಬ ಭಾವನೆ ಅವರಲ್ಲಿ ಹುಟ್ಟಿರಬಹುದೇ !" ಎಂಬ ಸಂಶಯವನ್ನು ಮಂಗೇಶ ಪಾಡಗಾಂವಕರ ಅಭಿವ್ಯಕ್ತ ಪಡಿಸುತ್ತಾರೆ. ಅಷ್ಟೇ ಅಲ್ಲ "ಅಭಿವ್ಯಕ್ತಿಯ ಯಾವ ಮಾಧ್ಯಮವನ್ನೂ ತಿರಸ್ಕರಿಸುವ ಪ್ರವೃತ್ತಿ ಒಳ್ಳೆಯದಲ್ಲ–ಆರೋಗ್ಯಕರವಲ್ಲ" ಎಂಬ ಕವಿ ಮಾತೂ ಹೇಳುತ್ತಾರೆ.

ತಮ್ಮ ಅನುಭವವನ್ನು ಪ್ರತೀಕಾತ್ಮಕ ಪದ್ಧತಿಯಲ್ಲಿ ಅಭಿವ್ಯಕ್ತಿಗೊಳಿಸುವುದು ಇಂದಿನ 'ಪೋಯಟಿಕ್ ಈಡಿಯುವ್' ಆಗಿದೆ. ಇದಕ್ಕೆ ಇಂದಿನ ಓದುಗರ ವೈಚಾರಿಕ ಶಕ್ತಿ ಬೆಳೆದದ್ದು ಒಂದು ಕಾರಣ. ಸಾಮಾಜಿಕ ಪ್ರಜ್ಞೆಯುಳ್ಳ ಕವಿಯ ಮೇಲೆ ಒಂದು ರೀತಿಯ ಒತ್ತಡದ ಭಾರವಿದೆ. ಈ ರೀತಿಯ ಒತ್ತಡದಿಂದಾಗಿ ಆತ ಪ್ರತೀಕದ ಆಶ್ರಯ ಪಡೆಯುತ್ತಾನೆ. ಇಂಥ ಒತ್ತಡ ದಲಿತ ಕವಿಗಳ ಮೇಲಿಲ್ಲ. ಹೀಗಾಗಿ ಅವರ ಕಾವ್ಯ ನೇರ ಮತ್ತು ಅಷ್ಟೇ ಒರಟು. ಯಶವಂತ ಮನೋಹರ ಇವರ 'ವೈರಿ' ಕವಿತೆಯಲ್ಲಿ ಈ ಸಾಲುಗಳಿವೆ.

"ಯಾರು ಮನುಷ್ಯತ್ವವನ್ನು ಶಬ್ದದಲ್ಲಿ ಕೊಳೆಸಿದರೋ....
ಅಂಥ ಪರಂಪರೆಯನ್ನು ನಾನು ನೇಗಿಲಿನಿಂದ ವಿಧ್ವಂಸಗೊಳಿಸುತ್ತೇನೆ".

ಇದು ದೇವರು, ಪರಂಪರೆ, ಆಸ್ತಿಕತೆಯ ಮೇಲೆ ನೇರ ಆಕ್ರಮಣ.

ಇಂದಿನ ಕವಿಗಳು ತಮ್ಮ ವ್ಯಕ್ತಿಗತ ಅನುಭವವನ್ನು ಪದರು–ಪದರಾಗಿ ಬಿಚ್ಚಿಡುತ್ತಾರೆ. ಅವರ ಬರವಣಿಗೆ ತಟಸ್ಥ. ನಮ್ಮನ್ನು ಕಾವ್ಯದ ರಮ್ಯಲೋಕಕ್ಕೆ ಕರೆದೊಯ್ಯುತ್ತಾರೆ.

"ನನ್ನ ಮುಖ ನೋಡಿ ಮೋಸ ಹೋಗಬೇಡಿ !
ಅದಕ್ಕಾಗೇ ನಾನು ಮದುವೆ ಮಾಡಿಕೊಂಡಿಲ್ಲ
(ಮದ್ವೇನೆ ಆಗಿಲ್ಲೆಂದರೆ ಸರಿಯಾಗಬಹುದೇನೋ !)
–ಹಾಗಾದ್ರೆ ನನ್ನ ವಂಶವೃಕ್ಷ–(?)–ಅದರ ಬೆಳವಣಿಗೆ (!)
ಇಲ್ಲೇ ಕುಂಠಿತವಾಯಿತೆನ್ನಲಡ್ಡಿಯಿಲ್ಲ"
(ನನ್ನೊಳಗಿನ ನಾನು)

ಗುರುನಾಥ ಸಾಮಂತರಲ್ಲಿ ವ್ಯಕ್ತವಾಗುವ ಸೂಚ್ಯ ಮತ್ತು ಸೂಕ್ಷ್ಮವಾದ ಪ್ರತೀಕ ಹಾಗೂ ನಿರ್ಲಿಪ್ತವಾದ ಧಾಟಿ ದಂಗುಬಡಿಸುವಂಥದು.

"ಆದರೀಗ ನಮ್ಮಿಬ್ಬರ ನಡುವೆ ನಿಂತಿದೆ
ಕಗ್ಗತ್ತಲೆಯೂ ಕಬ್ಬಿಣದ ಬಾಗಿಲು....
.......................................
ಮತ್ತು ನನ್ನ ಪಕ್ಕದಲ್ಲಿ ಜೋಕಾಲಿ ಮೇಲೆ ಉಳಿದುಕೊಂಡಿರುವುದು
ಕೇವಲ ಸ್ತ್ರೀತ್ವದ ಅಸ್ಥಿಪಂಜರ." (ಬೆಳ್ದಿಂಗಳು)

ರಜನೀ ಪರೂಳೇಕರ ಎಂಬ ಕವಯಿತ್ರಿಯ ಈ ಕವಿತೆಯಲ್ಲಿ ಮಾನವನೊಳಗಿನ ಸುಪ್ತ ಹಿಂಸ್ರ ಪ್ರವೃತ್ತಿಯ, ವಿಷಣ್ಣತೆಯ ಭಯಾನಕ ಚಿತ್ರ ಕಾಣಬಹುದು.

ಮಧ್ಯಮ ವರ್ಗೀಯ ಸಮಾಜದಲ್ಲಿ 'ಕಾಮ'ವನ್ನು ನಿರ್ಭಯವಾಗಿ ವ್ಯಕ್ತ ಪಡಿಸುವದು ಕಠಿಣ. ಬಹಿರಂಗವಾಗಿ ಬರೆಯಬೇಕೆಂದರೆ ಪಾಪ-ಪುಣ್ಯದ ಭಯ. ಹೀಗಾಗಿ ಈ ಕವಿಗಳು ಉಸಿರುಗಟ್ಟುವ ವಾತಾವರಣದಲ್ಲಿ ಬದುಕುತ್ತಾರೆ. ಗಂಭೀರ ವಾಗಿ ಬರೆಯುತ್ತಾರೆ. ಇದು ಅವರ ಕಾವ್ಯದ ಮೇಲೆ ನೇರವಾದ ಪರಿಣಾಮ ಬೀರುತ್ತದೆ.

ಹಿಂದಿನ ತಲೆಮಾರಿನ ಕವಿಗಳಿಗೆ –ತಾವು ಕಾವ್ಯ ರಚಿಸುವಾಗ ಛಂದಸ್ಸು, ಪ್ರಾಸ, ಲಯ, ಗೇಯತೆ, ವೈವಿಧ್ಯಪೂರ್ಣ ಅನುಭವ - ಇತ್ಯಾದಿಗಳನ್ನು ಹಸ್ತಗತ ಮಾಡಿ ಕೊಳ್ಳಬೇಕು, ಪ್ರಭುತ್ವ ಸಾಧಿಸಬೇಕು ಎಂಬ ಕಳಕಳಿ, ಛಲ ಇತ್ತು. ಆದರೆ ಇಂಥ ಕುತೂಹಲ, ಕಳಕಳಿ ಅಥವಾ ನೈಪುಣ್ಯ ಇತ್ತೀಚಿನ ಕವಿಗಳಲಿಲ್ಲ. ಈ ಕವಿಗಳೆಲ್ಲ ಸಾಮಾನ್ಯವಾಗಿ ಮುಕ್ತ ಛಂದಸ್ಸು ಇಷ್ಟಪಡುತ್ತಾರೆ. ಇವರ ಬದುಕು ಮತ್ತು ಬರಹ ಬೇರೆ ಬೇರೆಯಲ್ಲ. ಎರಡೂ ಒಂದೇ ಆಗಿರುವುದರಿಂದ ವೈವಿಧ್ಯತೆಯ ಅಭಾವ ಕಾಣಿಸಿ ಕೊಂಡಿದೆ. ಮಂಗೇಶ ಪಾಡಗಾಂವಕರನಂಥ ಕವಿಗಳೂ ಕೂಡ ಮುಕ್ತ ಛಂದಸ್ಸಿನ ಕಾವ್ಯ ಬರೆಯುವಾಗ, ಅದಕ್ಕೆ ಬೇಕಾದ ಶಿಸ್ತು ರೂಢಿಸಿಕೊಂಡರು. ಅಲ್ಲದೆ ಅವರು ಛಂದೋಬದ್ಧ ರಚನೆಯನ್ನು ಬಿಟ್ಟುಕೊಡಲಿಲ್ಲ. ದಿಲೀಪಚಿತ್ರೆ, ಖಾನೋಲಕರ ಗ್ರೇಸ, ಮಹಾನೋರನಂತಹ ಕವಿಗಳು ಈ ಎರಡೂ ತಂತ್ರಗಳನ್ನು ಹಸ್ತಗತ ಮಾಡಿ ಕೊಂಡಿದ್ದರು. ಆದರೆ ಈ ಹೊಸ ಪೀಳಿಗೆಗೆ ಛಂದೋಬದ್ಧ ಕವಿತೆ ಹಿಡಿಸುವುದಿಲ್ಲ. ಕವಿಯಾದವನಿಗೆ ಛಂದಸ್ಸಿನ ಮೇಲೆ ಪ್ರಭುತ್ವ ಸಾಧಿಸಿಕೊಳ್ಳುವದು ಅತೀ ಅವಶ್ಯಕ. ಅದು ಭಾಷೆಯ ಮೂಲಕ, ಅದರ ಅನೇಕ ಆಯಾಮಗಳ ಮೂಲಕ ತನ್ನನ್ನು ಕಂಡು ಕೊಳ್ಳುವ ಒಂದು ಪ್ರಯತ್ನ.

ಮರಾಠಿ ಹೊಸ ಕಾವ್ಯದೊಳಗಣ ವಾಸ್ತವಿಕತೆಯಲ್ಲಿ ನಿರ್ಲಿಪ್ತ ಭಾವನೆ ಹೊರ ಹೊಮ್ಮುತ್ತಿರುವುದನ್ನು ಕಾಣಬಹುದು. ಈ ನಿರ್ಲಿಪ್ತತೆ ಕಾವ್ಯ ರಚನೆಯ ಇನ್ನೊಂದು ಭಾಗವೇನೋ ? ಇಂದಿನ ಕವಿಗಳಿಗೆ ಸನಾತನ ಮೌಲ್ಯಗಳ ಬಗ್ಗೆ ಸಂಶಯ. ಈ ಸಂಶಯದ, ತಿರಸ್ಕಾರದ ಪರ್ಯಾವಸಾನ ಇಂಥ ನಿರ್ಲಿಪ್ತತೆಗೆ ಕಾರಣವಾಗಿರ ಬಹುದು.

"ನಾನು ಇಲ್ಲಿಯ ದಿಕ್ಕುಗಳ ಸೇಡಿನ ಉಗುಳು,
ತಿರಸ್ಕೃತ.
ಮತ್ತು ಅವರ ಪರಂಪರೆಗೆ ನಿಷಿದ್ಧ.
ನನ್ನ ತಪ್ಪಿತಸ್ತ ಬದುಕಿನ ದೈನ್ಯ ಅಳಿಸಿ

ಸಂಸ್ಕೃತಿಯ ಅನ್ನಕುದಿಸಲು
ನಾನಿಲ್ಲಿ ನಿಂತಿದ್ದೇನೆ" (ಯಶವಂತ ಮನೋಹರ)

ಕಾಮ, ಪ್ರೇಮ ಗೀತೆಗಳನ್ನು ಬರೆಯುವಾಗಲೂ ಕೂಡ ಇಂಥದೇ ಧಾಟಿ ಕಾಣ ಬಹುದು.

ಮಧ್ಯರಾತ್ರಿ ನಾ ಕಂಡೆ
ಆಕೆಯ ಕಂಗಳಲ್ಲಿ ಹೊತ್ತಿ ಉರಿಯುತ್ತಿರುವ
ಕಪ್ಪು ಕಮಲದ ತೋಟವನ್ನು
ಮತ್ತು ಸ್ತನಗಳ ಮೇಲೆ ಸಿಡಿಸುತ್ತಿರುವ
ಚಿಟ್ಟೆಗಳನ್ನು (ಅನಿಲ ದ್ರವಿಡ)

ಹೆಣ್ಣಿನ ಬಗ್ಗೆ ಬರೆಯುವಾಗಲೂ ಸಹ ಇಂಥ ನಿರ್ಲಿಪ್ತ, ಕ್ಲಿಷ್ಟ ಪ್ರತಿಮೆಗಳನ್ನು ಬಳಸ ಲಾಗಿದೆ. ಹೆಣ್ಣಿನ ನಗು ಕಾವ್ಯ ಪ್ರತಿಮೆಯಷ್ಟೇ ಗೂಢ ಎನ್ನುವ ಹೇಮಂತ ಜೋಗಳೇಕರ ಇವರ ಈ ಕವಿತೆ ನೋಡಿ—

ರಾತ್ರಿ ನೀನು ನನ್ನೊಡನೆ ಮಲಗುತ್ತಿ,
ಮುಂಜಾನೆ ನನಗಾಗಿ ಉಪಹಾರ ಸಿದ್ಧಗೊಳಿಸುತ್ತಿ,
ನಾನು ಆಫೀಸಿಗೆ ಹೊರಟು ಹೋದ ಬಳಿಕ
ನನಗಾಗಿ ಊಟ ಕಳಿಸುತ್ತಿ,
ಸಾಯಂಕಾಲ ನಾನು ನಿನ್ನನ್ನು
ತಪ್ಪದೆ ವಾಕಿಂಗ್‌ಗೆ ಕರೆದೊಯ್ಯುತ್ತೇನೆ.
ಹಾದಿಯಲ್ಲಿ ಯಾರಾದರೂ ಭೇಟಿಯಾದರೆ
ನಿನ್ನನ್ನು ಪರಿಚಯಿಸುತ್ತೇನೆ
'ಈಕೆ ನನ್ನ ಹೆಂಡತಿ' ಎಂದು.
ನೀನಾಗ ನಗುತ್ತಿ.
ಯಾಕೆ ನಗುತ್ತಿ ?
ಸತ್ಯವಾಗಿ ಹೇಳು, ಯಾಕೆ ನಗುತ್ತಿ ?

ರ. ಕೃ. ಜೋಷಿ ಎಂಬ ಕವಿ ಕಾವ್ಯದಲ್ಲಿ ಹಲವು ಪ್ರಯೋಗಗಳನ್ನು ಮಾಡುತ್ತಾರೆ. ಕವಿತೆಗೆ ಪಠನ-ದೃಶ್ಯ-ಶ್ರವ್ಯ ಮಾಧ್ಯಮಗಳಿರುವುದನ್ನು ಈ ಕವಿ ಒಪ್ಪುತ್ತಾರೆ. ಹಸ್ತಾಕ್ಷರ ಕವಿತೆ, ಮುದ್ರಾಕ್ಷರ ಕವಿತೆ, ದೃಶ್ಯ ಕವಿತೆ, ಜಾಹೀರಾತು ಕವಿತೆ –ಇಂಥ

ಹಲವು ಕಾವ್ಯ ಪ್ರಯೋಗ ಇವರಿಂದ ಹುಟ್ಟಿಕೊಂಡವು. ಕವಿತೆ ಬರೆಯುವಾಗ ಧ್ವನಿ ಇಲ್ಲವೆ ದೃಶ್ಯ ಅಧಿಕವಾಗಿ ಬಳಸಿದ್ದರಿಂದ ಅದರ ಆಶಯು ಮನಸ್ಸಿನ ಮೇಲೆ ತೀವ್ರವಾಗಿ ಮೂಡುತ್ತದೆ ಎಂಬುದು ಅವರ ಅಭಿಪ್ರಾಯ.

ಇಂಥ ಕವಿತೆಗೆ ಅವರು 'ಮೂರ್ತ ಕವಿತೆ' ಎಂದು ಹೆಸರಿಸುತ್ತಾರೆ.

ಕೇಳಿರಿ ಕೇಳಿ

ನಾಳೆ ನಾನು ನನ್ನ ಸಂಪತ್ತು ಹರಾಜು ಹಾಕುತ್ತೇನೆ
ಮಾಸಿದ
ಮೂರು
ಖುರ್ಚಿಗಳು
ಜಜ್ಜಿದ
ನಾಲ್ಕೈದು
ಪಾತ್ರೆಗಳು
ಸನ್‌ಮೈಕ
ಉಚ್ಚಿದ
ಟೇಬಲ್
ಒಂದು
ಡಿಸೈನಿನ
ಕಪ್ಪು–ಬಸಿಗಳೆರಡು
ಉರಿಯದ ಲೈಟರ್
ಲೀಕ್
ಆಗುವ
ಗ್ಯಾಸ
ಉಡುಗೊರೆ ಸಿಕ್ಕ ಬಾಲ್‌ಪೆನ್ನು
ಹೋದ
ವರ್ಷದ
ಡೈರಿ ಮತ್ತು ಈ ಕವಿತೆ.

ಈ ಕವಿಗಳು ಕಾವ್ಯವನ್ನು ತುಂಬಾ ಗಂಭೀರವಾಗಿ ರಚಿಸುತ್ತಾರೆ. ಕಾವ್ಯ ರಚನೆ ಈಗ ಫ್ಯಾಶನ್ ಆಗಿ ಉಳಿದಿಲ್ಲ. ಇದೊಂದು ಉತ್ಕಟ ಸೃಷ್ಟಿ ಕ್ರಿಯೆ. ಮಾನವನ ಬದುಕನ್ನು ಅರ್ಥಮಾಡಿಕೊಳ್ಳುವ ಪ್ರಯತ್ನವನ್ನು ತುಂಬಾ ಗಂಭೀರವಾಗಿ ಮಾಡುತ್ತಿದ್ದಾರೆ. ನವ್ಯಕಾವ್ಯ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಅದರ ಪ್ರಭಾವದ ನೆರಳಿನಲ್ಲಿ ಈ

ಕವಿಗಳು ಬೆಳೆದರು. ಇಷ್ಟಾದರೂ ಅನುಭವದ ದೃಷ್ಟಿಯಿಂದ, ಭಾಷೆಯ ದೃಷ್ಟಿಯಿಂದ ಯಾವುದೇ ಲೇಬಲ್ಲಿಗೆ ಅಂಟಿಕೊಳ್ಳದೆ ಸ್ವತಂತ್ರ ಹಾದಿ ಹಿಡಿದ ಅವರ ಕಾವ್ಯ ರಚನೆ ಅಚ್ಚರಿಗೊಳಿಸುವಂಥದ್ದು. ಅವರ ಬರವಣಿಗೆಯಲ್ಲಿಯ ಈ ಆತ್ಮವಿಶ್ವಾಸ, ಸಹಜತೆ, ಸಂವೇದನೆ, ಆತ್ಮನಿಷ್ಠೆ, ಆತ್ಮಸಮ್ಮಾನ ನಿಜಕ್ಕೂ ಸ್ವಾಗತಾರ್ಹವಾದುದು.

ಇನ್ನು ನಾನು ಚರ್ಚಿಸುವ ವಿಷಯ ಮರಾಠಿಯ ದಲಿತ ಕಾವ್ಯಕ್ಕೆ ಸಂಬಂಧಪಟ್ಟದ್ದು. ಸ್ವಾತಂತ್ರ್ಯನಂತರ ಬಂದ ಹೊಸ ಮರಾಠಿ ಕಾವ್ಯ ತುಂಬಾ ಕ್ಷೀಣವಾಗಿತ್ತು. ವಿಮೋಚನೆಗಾಗಿ ಹೋರಾಡುವ ಸಮೂಹ ನಿರ್ಲಕ್ಷಿಸಿದ್ದು ಅತೀ ದೊಡ್ಡ ದ್ರೋಹ. ಆಗ ಕಾಲಕ್ಕನುಗುಣವಾದ ಹೊಸ ಸಂವೇದನೆಯ, ಉದ್ರೇಕದ ಅವಶ್ಯಕತೆ ಬಿತ್ತು. ಹೀಗೆ ಆತ್ಮ ಸಹಾಯಕ್ಕಾಗಿ ಹುಟ್ಟಿಕೊಂಡ ಕವಿತೆ ಸಂಘರ್ಷದ, ಬಂಡುಕೋರ ಪ್ರವೃತ್ತಿಯ 'ವಿದ್ರೋಹಿ ಕವಿತೆ' ಎನಿಸಿಕೊಂಡಿತು. ಹಳೇ ಪರಂಪರೆ, ಕಾವ್ಯಮಾರ್ಗ, ಕೊನೆಗೆ ಗುಲಾಮಗಿರಿಯ ಶಬ್ದಗಳೂ ಕೂಡ ತಿರಸ್ಕರಿಸಲ್ಪಟ್ಟವು. ತುಳಿತಕ್ಕೊಳಗಾದ ಈ ಜನ ತಮ್ಮ ಅನುಭವವನ್ನು ತುಂಬಾ ಜಾಗರೂಕತೆಯಿಂದ ಜೋಪಾನ ಮಾಡಿದ್ದರಿಂದ ಈ ಅನುಭವ, ಈ ಶಬ್ದ, ಈ ಕಾವ್ಯ ಸಾಂಪ್ರದಾಯಿಕ ಕಾವ್ಯಕ್ಕಿಂತ ಭಿನ್ನವಾಯಿತು. ಹೊಸ ಆವಿಷ್ಕಾರವನ್ನು ಪಡೆಯಿತು. ತಲೆತಲಾಂತರಗಳಿಂದ ತಮ್ಮ ಮೇಲಾದ ಅನ್ಯಾಯವನ್ನು, ಜಗತ್ತಿಗೆ ಸಾರುವ, ತನ್ಮೂಲಕ ತಮ್ಮ ಹಕ್ಕನ್ನು ಸ್ಥಾಪಿಸುವ ಹೊಣೆಗಾರಿಕೆಯನ್ನು ಈ ದಲಿತ ಕಾವ್ಯ ಹೊರುತ್ತದೆ.

ಮರಾಠಿಯ ದಲಿತ ಕಾವ್ಯದ ಕೂಗು ಡಾ॥ ಅಂಬೇಡ್ಕರ್‌ಗಿಂತ ಮೊದಲೇ ಕೇಳಿ ಬರುತ್ತಿತ್ತು. ಅಂಬೇಡ್ಕರರ ಕಾಲದಲ್ಲಿ ಇದು ಇನ್ನಷ್ಟು ತೀವ್ರಗೊಂಡಿತು. ಶತಮಾನಗಳಿಂದಲೂ ಅಂಟಿಕೊಂಡಿದ್ದ ಸಂಬಂಧವನ್ನು ಝಾಡಿಸಿ, ಮೇಲಕ್ಕೇಳುವ ಮಾನಸಿಕ ಸಿದ್ಧತೆಗೆ ಚಾಲನೆ ಸಿಕ್ಕಿತು. ಕ್ಷೀಣ ದನಿಗೆ ಹೊಸ ಆವಿಷ್ಕಾರ ಸಿಕ್ಕು, ಆಕ್ರೋಶದ ಕೂಗು ಕೇಳಿಸಲಾರಂಭಿಸಿತು. ತಮ್ಮ ಸುತ್ತಲಿನ ಪರಿಸ್ಥಿತಿ ಬಗೆಗಿನ ಮೌಲ್ಯಮಾಪನ ಮಾಡುವ ಸಾವಿರಾರು ಕವಿತೆಗಳು ಹುಟ್ಟಿಕೊಂಡವು. ದೇವಾಲಯ ಪ್ರವೇಶ, ಅನ್ನ–ವಸತಿ ಅವಶ್ಯಕತೆ, ಗುಲಾಮಗಿರಿ ದ್ವೇಷ, ಧಾಂಬಿಕತನ-ಧರ್ಮದ ದ್ವೇಷ, ಮತಾಂತರದ ಬಲವು, ನೀರಿಗಾಗಿ ಹೋರಾಟ, ಆತ್ಮವಿಶ್ವಾಸ, ಶಿಕ್ಷಣಕ್ಕಾಗಿ ಆಸಕ್ತಿ – ಇಂಥ ಹತ್ತು ಹಲವು ಮೂಲಭೂತ ವಿಚಾರ, ಸಮಸ್ಯೆಗಳು, ಈ ದಲಿತ ಕವಿತೆಗಳಲ್ಲಿ ಪ್ರಕಟಗೊಂಡವು.

ಈ ಮೊದಲಿನ ಕಾವ್ಯವೆಲ್ಲಾ ಪರಂಪರೆಯ ಮೂಸೆಯಲ್ಲಿ ಅದ್ದಿ ತೆಗೆದದ್ದು. ಇದು ಕೇವಲ ದೇವರು, ಪುರಾಣ, ಇತಿಹಾಸದ ಸುತ್ತಲೇ ಗಿರಿಗಿಟ್ಟಿ ಹೊಡೆಯುವಂಥ ಭವ್ಯ ಕಲ್ಪನೆಯ ಥಳುಕಿನ ಕಾವ್ಯ – ಇದಕ್ಕೆ ಮನುಷ್ಯನ ವ್ಯಾಪಕ ಜೀವನದ ಕಲ್ಪನೆಯೇ ಇಲ್ಲ. ಪರಿಣಾಮ ಪರಂಪರೆಗೆ ಮಾರುಹೋದ ಕವಿಗಳಾದ ಕೇಶವಸುತ, ಮುಕ್ತಿಬೋಧ, ಕರಂದಿಕರ ಇವರ ಕೆಲವು ಕವಿತೆಗಳಲ್ಲೂ ಬಂಡಾಯದ ವಾಸನೆ ಹೊರಹೊಮ್ಮಿತ್ತು.

ದಲಿತ ಬೆಳೆದದ್ದು, ಬರಡು ವ್ಯವಸ್ಥೆಯಲ್ಲಿ. 'ನಮ್ಮ ಜಗತ್ತೆ ಬೇರೆ' ಎಂದು ದಲಿತ ಕವಿಯೊಬ್ಬ ಸ್ಪಷ್ಟಪಡಿಸುತ್ತಾನೆ. ಈ ಕಾವ್ಯ ಶೋಷಣೆಯ ಮೇಲೆ ನಿಂತ ಹಳೇ ಸಂಸ್ಕೃತಿಯನ್ನು ಉರುಳಿಸುವ ಸನ್ನಾಹ ಮಾಡುತ್ತದೆ. ಮೋಕ್ಷ, ಮುಕ್ತಿ, ವೇದಾಂತ ಕಂಡರೆ ಅದಕ್ಕೆ ತಿರಸ್ಕಾರ. ಮಾನವೀಯ ನ್ಯಾಯಕ್ಕಾಗಿ ತನ್ನ ಹೋರಾಟ ವೆಂದು ಈ ಕಾವ್ಯ ಘೋಷಿಸುತ್ತದೆ. ಇದಕ್ಕೆ ಬುದ್ಧ, ಚಾರ್ವಾಕ, ಮಾರ್ಕ್ಸ್, ಅಂಬೇಡ್ಕರ್, ಲೆನಿನ್ ಇವರ ಸಿದ್ಧಾಂತ ಪ್ರೇರಣೆ ನೀಡಿದ್ದು ಗಮನಾರ್ಹ.

ಹಿಂದೂ ಧರ್ಮದ ವಿರುದ್ಧ ಸಿಡಿದೆದ್ದ ಫುಲೆ, ಕೊಂಡೀರಾಮ, ಥಾಗೂ; ಮಾರ್ಕ್ಸ್ ಪ್ರಭಾವದ ಸಾಠೆ, ಅಮರಶೇಖ; ಸಮತೂಕ ಬರವಣಿಗೆಯ ಮುಕ್ತಿ ಬೋಧ, ನಾರಾಯಣ ಸುರ್ವೆ, ನಾಮದೇವ ಢಸಾಳ, ಕೇಶವ ಮೇಶ್ರಾಮ, ದಯಾಪ ವಾರ, ಸಪಕಾಳೆ; ಶೋಧನೆ ಮಾರ್ಗ ಹಿಡಿದ ನರೇಶ ಇಂಗಳೆ, ಡಾಂಗಳೆ, ನಿಂಬಾಳಕರ, ಕೊಂಡವಿಲಕರ, ಅರುಣ ಕಾಂಬಳೆ, ಮೋರೆ, ವಿೂನು — ಇತ್ಯಾದಿ ದಲಿತ ಕವಿಗಳ ಹಿಂದಿನ ಪ್ರೇರಣೆ, ಅನುಭವ ದ್ರವ್ಯ ಸಾಕಷ್ಟು ವೈವಿಧ್ಯತೆಯಿಂದ ಕೂಡಿದೆ. ಹೀಗಾಗಿ ಪ್ರಮುಖ ದಲಿತ ಕಾವ್ಯಕ್ಕೆ ಹಲವು ಉಪಮಾರ್ಗಗಳೂ ಇವೆ. ಹಿಂದೂ ದಲಿತ, ಬೌದ್ಧ ವಿದ್ರೋಹಿ, ಸಮಾಜವಾದೀ, ಮಾರ್ಕ್ಸ್‌ವಾದೀ, ಅಂಬೇಡ್ಕರ್‌ವಾದೀ – ಇಂಥ ವಿಚಾರಧಾರೆಯಿಂದ ಹೊರಹೊಮ್ಮಿದ ನೂರಾರು ಕವಿತೆಗಳು ಇದರಲ್ಲಿ ಸಮಾವೇಶ ಗೊಂಡಿವೆ. ಆದ್ದರಿಂದಲೇ ಈ ವಿದ್ರೋಹಿ ಕವಿತೆಗಳಿಗೆ ಮರಾಠಿ ಕಾವ್ಯ ಪ್ರಪಂಚದಲ್ಲಿ ವಿಶಿಷ್ಟ ಸ್ಥಾನವಿದೆ.

ದಲಿತ ಕಾವ್ಯ ವ್ಯವಸ್ಥೆಯ ದೌರ್ಬಲ್ಯವನ್ನು ಎತ್ತಿ ತೋರಿಸಿತು. ಚೆಂದವಣಕರ ಅವರ ಕಾವ್ಯ ನೋಡಿ —

"ಹಿಂದಿನ ಜನ್ಮದ ಕೊಳೆತ ಸ್ಟ್ಯಾಂಪು
ಎಂದೋ ಔಟ ಡೇಟೆಡ್ ಆಗಿವೆ.
ನಿಮ್ಮ ಹಣೆಯ ಮೇಲಿನ ಗಂಥ
ಇದಕ್ಕಿಂತ ಮೊದಲೇ ಬಾಯಕಾಟಾಗಿದೆ."

ಭವಿಷ್ಯಕಾಲದ ದಿಟ್ಟ ಬದುಕಿನ ಬಗ್ಗೆ ವ್ಯಾಖ್ಯೆ ನೀಡುವ ದಯಾ ಪವಾರ —

"ಪ್ರಖರ ತೇಜಸ್ಸಿನಿಂದ ಹೊಳೆವ ಸೂರ್ಯ
ಎಂದೋ ಅಸ್ತಂಗತನಾಗಿದ್ದಾನೆ.
ಯಾವ ಮಿಣುಕುಹುಳದ ಬಗ್ಗೆ ಜಯಘೋಷ ಹೊರಡಿಸಿದ್ದಿರೋ
ಅವು ಎಂದೋ ನಿಸ್ತೇಜಗೊಂಡಿವೆ.
ಈಗ ನೀವೆ ಬೆಳಕಿನ ಪಂಜುಗಳಾಗಿ
ಮತ್ತೆ ಕ್ರಾಂತಿಯ ಜಯಕಾರ ಹಾಕಿ."

ನಾರಾಯಣ ಸುರ್ವೇ ಕವಿತೆಯಲ್ಲಿ ಕಠೋರ ವಾಸ್ತವ ಚಿತ್ರಣ ಹೀಗೆ ಮೂಡಿ ಬರುತ್ತದೆ —

ನಾವು ಯುದ್ಧವನ್ನು ಬಿತ್ತುವುದಿಲ್ಲ
ಬುದ್ಧರನ್ನು ನಿರ್ಮಿಸುತ್ತೇವೆ.
ನಾವು ಹರಿಸುತ್ತೇವೆ ಬೆವರಿನ ಕಣ
ಅದರಿಂದ ಗಳಿಸುತ್ತೇವೆ ಕಾಂಚಾಣ.

ಬಂಡುಕೋರ ಕವಿಯೆಂದೇ ಪ್ರಸಿದ್ಧನಾದ ನಾಮದೇವ ಢಸಾಳರ ಕಾವ್ಯ —

ದಶದಿಕ್ಕಿನ ಬಾಗಿಲು ತಟ್ಟಿದ ನಿನ್ನ ಕೀರ್ತಿ
ಸಪ್ತಸಾಗರ ದಾಟುವ ಬುದ್ಧನ ಪ್ರತಿಮೆಯನ್ನು
ನುಚ್ಚುನೂರು ಮಾಡಿತು.
ಮನುಷ್ಯನನ್ನು ಗುಲಾಮನನ್ನಾಗಿಸಿತು ...
ಪಾಖಂಡಿ ಮನು-ಮಾನವನ ಶತ್ರುವನ್ನು
ತಲೆ ಮೇಲೆ ಹೊತ್ತು ತಿರುಗಾಡಿದಿ....
ಮನುಷ್ಯನಿಂದಲೇ ಮನುಷ್ಯನ ಉಚ್ಚ-ನೀಚ ಬೆಳೆಯಲು ಹಚ್ಚಿದಿ.
ಯಾರ ರಕ್ತ-ಮಾಂಸದಿಂದ ನಿನ್ನ ಪಿಂಡ ಬೆಳೆಯಿತೋ
ಆ ಮಹಾತ್ಮರನ್ನು ಕೊಳೆಸಿ. ಮಹಾಭಾರತ ಸೃಷ್ಟಿಸಿದಿ.

ಹೀಗೆ ದಲಿತ ಕಾವ್ಯ ವ್ಯವಸ್ಥೆಯಲ್ಲಿದ್ದ ಕೊಳಕುತನ, ನೀಚತನ, ದೌರ್ಬಲ್ಯಗಳನ್ನು ಬಯಲಿಗೆಳೆವ ದಿಟ್ಟತನ ತೋರಿತು. ಧರ್ಮ, ಸತ್ತೆ, ದೇವರು, ಪಾಪ-ಪುಣ್ಯದ ಮೇಲೆ ಪ್ರಹಾರ ಮಾಡಿತು. ಕೇಶವ ಮೇಶ್ರಾಮ ಎಂಬ ಕವಿ —

ಮಗನೇ ತುಣುಕು ರೊಟ್ಟಿಗಾಗಿ
ಬಂಡಿ ಸೌದೆ ನೀನು ಒಡೆಯುತ್ತೀಯಾ ?....
ನಿನ್ನಪ್ಪನ ಚುಟ್ಟದ ಚಟಕ್ಕಾಗಿ
ತಂಗಿ-ತಮ್ಮರ ಜೀವ ಹಿಂಡುತ್ತೀಯಾ ?
ಸೆರೆಯ ಒಂದು ಗುಟುಕಿಗಾಗಿ
ಘೋರ ಗೊಂದಲವೆಬ್ಬಿಸುತ್ತೀಯಾ ?

ಎಂದು ದೇವರಿಗೇ ಸವಾಲು ಹಾಕುವ ಧೈರ್ಯ ಮಾಡುತ್ತಾರೆ ; 'ಭವಿಷ್ಯಕಾಲದ ದರ್ಬಾರಿನಲ್ಲಿ ಕ್ರಾಂತಿಯ ತಾಂಡವ ನೃತ್ಯ'ದ ದೃಶ್ಯ ಕಾಣುತ್ತಾರೆ. ಹೀಗೆ 'ವಿದ್ರೋಹಿ' ಕವಿತೆ ಮಾನವೀಯತೆಗೆ, ಸ್ವಮುಕ್ತಿ, ಕ್ರಾಂತಿಗೆ ಅಗ್ರಸ್ಥಾನ ನೀಡಿದೆ. ನೇರ ಹಾಗೂ ಸರಳತನವೇ ಈ ಕಾವ್ಯ ರಚನೆಯ ವೈಶಿಷ್ಟ್ಯ. ಇದಕ್ಕೆ ಇದರದೇ ಆದ ಒಂದು ಭಾಷೆಯಿದೆ, ತಂತ್ರವಿದೆ, ಕಾವ್ಯವಸ್ತುವಿದೆ. ಇದು ದಲಿತರ ನರ-ನಾಡಿಗಳಲ್ಲಿ ಹರಿವ ಜೀವನದ ನೇರ, ಪ್ರತ್ಯಕ್ಷದರ್ಶನ ಮಾಡಿಕೊಡುತ್ತದೆ. ಹೀಗಾಗಿ ಇದು ಉದ್ರೇಕ, ಆಕ್ರೋಶದ ಹಂತವನ್ನು ಮೀರಿ ನಿಲ್ಲುತ್ತದೆ. ವೈವಿಧ್ಯಮಯ ಬದುಕಿನ ಹಿನ್ನೆಲೆಯಲ್ಲಿ ಈ ಧ್ವನಿ ರೂಪಗೊಳ್ಳುವುದರಿಂದ, ದಲಿತ ಕಾವ್ಯಕ್ಕೆ ಏಕತಾನತೆಯ ಶಾಪ ಅಂಟಿಕೊಳ್ಳುವುದಿಲ್ಲ. ದಲಿತ ಕಾವ್ಯದ ಪಿಂಡ ಮೂಲತಃ ಹೋರಾಟದ್ದು. ಜಾಗತಿಕ

ಪಾತಳಿಯಲ್ಲಿ ಇಂಥ ಹೋರಾಟದ ಮೂಲಸೆಲೆಯನ್ನು ರಷಿಯನ್ ಕವಿತೆ, ನೀಗ್ರೋ ಕವಿತೆ, ಆಫ್ರಿಕನ್ ಕವಿತೆಗಳಲ್ಲಿ ಕಾಣಬಹುದು. ಈ ಕಾವ್ಯ ಆಯಾ ದೇಶದ ಜನರ ಹೋರಾಟದ ಕನಸು.

ಇತ್ತೀಚೆಗೆ ದಲಿತ ಕಾವ್ಯ ವ್ಯಾಪಕವಾಗಿ ಬೆಳೆಯುತ್ತಿದೆ. ಕಳೆದ ದಶಕದ ಇದರ ಬೆಳವಣಿಗೆ ಅಚ್ಚರಿಗೊಳಿಸುವಂಥದು. ಇದಕ್ಕೆ ಕುಸುಮಾಗ್ರಜ, ಕರಂದಿಕರ, ವಿಜಯ ತೆಂಡೂಲ್ಕರರಂತಹ ಕವಿಗಳ ಬೆಂಬಲ ದೊರಕಿದೆ. ಬರವಣಿಗೆಯ ವೇಗ, ಹೊಸ ಹೊಸ ಶಬ್ದಗಳ ಸೃಷ್ಟಿ, ಆತ್ಮವಿಶ್ವಾಸದ ಬರವಣಿಗೆ, ಜಾಗತಿಕ ಪಾತಳಿಯ ಹೋರಾಟದಿಂದಾಗಿ ದಲಿತ ಕಾವ್ಯ ಮತ್ತಷ್ಟು ಬಲಶಾಲಿಯಾಗುತ್ತಿದೆ. "ದಲಿತ ಕಾವ್ಯ ಕಳೆದ 500 ವರ್ಷಗಳ ಮರಾಠಿ ಕಾವ್ಯಕ್ಕಿಂತ ಭಿನ್ನ. ಅದು ಶಿಲ್ಪದಷ್ಟೇ ಪ್ರಮಾಣಬದ್ಧ. ಮೋಸದ ಭ್ರಾಮಕ ಪರಿಭಾಷೆಯನ್ನು, ಅದರ ಹಾವ-ಭಾವವನ್ನು, ಪರಂಪರಾಗತ ದೃಷ್ಟಿಯನ್ನು ದಲಿತ ಕಾವ್ಯ ಪರಚಿ ಕಿತ್ತೆಸೆದು ಸ್ವಚ್ಛಗೊಳಿಸಿದೆ" — ಎಂಬ ಕೇಶವ ಮೇಶ್ರಾಮರ ಹೇಳಿಕೆ ತುಂಬಾ ಅರ್ಥಗರ್ಭಿತವಾಗಿದೆ.

ದಲಿತ ಕಾವ್ಯದಲ್ಲಿ ಇಂದು ವ್ಯಕ್ತವಾಗುವ ಅದರ ಮೂಲಭೂತ ಪ್ರಶ್ನೆ, ಸವಾಲು, ಆಹ್ವಾನ, ಬಿಕ್ಕಳಿಕೆ, ಆಸ್ಫೋಟನೆಯನ್ನು, ಅದರ ಭಾಷೆಯನ್ನು ನಾವಿಂದು ಅರ್ಥ ಮಾಡಿಕೊಳ್ಳಬೇಕಾಗಿದೆ. ಹೀಗಾದಾಗಲೇ ದಲಿತ ಕಾವ್ಯ ಒಂದು ಕಲೆಯಾಗ ಬಹುದು. ಅದಕ್ಕೊಂದು ಮಾನವೀಯ ದರ್ಜೆ, ಹಕ್ಕು ಸಿಗಬಹುದು.

ಇಲ್ಲಿಯವರೆಗೆ ದೀರ್ಘವಾಗಿ ಚರ್ಚಿಸಿದ ಇತ್ತೀಚಿನ ಮರಾಠಿ ಕಾವ್ಯದ ದೌರ್ಬಲ್ಯ ಹೇಳದಿದ್ದರೆ ಈ ಲೇಖನ ಅಪೂರ್ಣವಾದೀತು —

1) ಇಂದಿನ ಪ್ರೇಮಕಾವ್ಯದಲ್ಲಿ ಉತ್ಕಟತೆ ಇಲ್ಲದಿರುವುದು,
2) ಛಂದೋಬದ್ಧ ಮಾರ್ಗ ಬಿಟ್ಟು ಮುಕ್ತ ಛಂದಸ್ಸಿನಲ್ಲಿ ಕಾವ್ಯ ರಚಿಸುತ್ತಿರುವುದು,
3) ನಿಸರ್ಗ ಭವ್ಯ ದರ್ಶನ, ದಿವ್ಯ ಚೈತನ್ಯಕ್ಕೆ ಮಾರುಹೋಗದಿರುವುದು, ಒಟ್ಟು ನಿಸರ್ಗ ಚಿತ್ರಣದ ಅಭಾವ,

ಮೇಲಿನ ಈ ಪ್ರಶ್ನೆಗಳಿಗೆ ವಿಮರ್ಶಕರು ಗಂಭೀರವಾದ ಚಿಂತನೆ ನಡೆಸಿ, ಉತ್ತರ ಕಂಡುಕೊಳ್ಳುವ ಪ್ರಯತ್ನದಲ್ಲಿದ್ದಾರೆ.

—o—

ಗ್ರಂಥಋಣ :—

1) ಕವಿತಾ ದಶಕಾಚಿ — ಸಂ. : ತಾಡಗಾಂವಕರ, ಪವಾರ, ರೈ, ರಾಜಾಧ್ಯಕ್ಷ
2) ವಿದ್ರೋಹಿ ಕವಿತಾ — ಕೇಶವ ಮೇಶ್ರಾಮ
3) ಕವಿತಾಂಚೆ ರಸತೀರ್ಥ — ಪ್ರೊ॥ ನಾಂದ್ರೇಕರ
4) ವಿದ್ರೋಹಾಚೆ ಪಾಣೀ ಪೇಟತೆ — ಗಂಗಾಧರ ಪಾನತವಣೆ

# ಹಕ್ಕಿಗಳು

ಮೂಲ : ಕೇಶವ ಮೇಶ್ರಾಮ
ಅನು : ಚಂದ್ರಕಾಂತ ಪೋಕಳೆ

[ಕೇಶವ ಮೇಶ್ರಾಮ್ : ಅಕೋಲಾ–ಮುಂಬೈ ನಗರದಲ್ಲಿ ಶಿಕ್ಷಣ. ಬಾಲ್ಯದಿಂದಲೇ ಅಸ್ಪೃಶ್ಯತೆಯ ಕಟು ಅನುಭವ. ಇದ್ದಲಿ–ಸುಣ್ಣದ ಭಟ್ಟಿ; ಎಣ್ಣೆ ಗಾಣ, ಗೌಂಡಿ ಯಂತಹ ಕಠಿಣ ಕೆಲಸದ ಅನುಭವ. ರೈಲ್ವೆಯಲ್ಲಿ ಗುಮಾಸ್ತನಾಗಿ ಆರು ವರ್ಷದ ಅನುಭವ. ಸದ್ಯ ದಯಾನಂದ ಕಾಲೇಜಿನಲ್ಲಿ ಮರಾಠಿ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಣೆ. ಪ್ರಥಮ ಕಾದಂಬರಿಗೆ ಮಹಾರಾಷ್ಟ್ರ ಸರಕಾರದ ಪ್ರಶಸ್ತಿ. ಕಥೆ, ಕವಿತೆ, ವಿಮರ್ಶೆ, ಪ್ರಬಂಧ, ಬಾಲಕಥೆ ಮತ್ತು ಕಾದಂಬರಿ ಕ್ಷೇತ್ರಗಳಲ್ಲಿ ಸಾಹಿತ್ಯ ರಚನೆ. ಹಲವು ಸಂಘ–ಸಂಸ್ಥೆಗಳ ಅಧ್ಯಕ್ಷ. ಅಸ್ಪೃಶ್ಯ ಸಮಾಜದ ಮುಖವಾಣಿಯಾದ ಕವಿತೆಗಳ ರಚನೆ.]

ಹಕ್ಕಿಗಳೇ,
ನಿಮಗಾಗಿ ನಾನೇನು ಮಾಡಲಿ ಹೇಳಿ ?
ಆದರೆ ಕೇಳಬೇಡಿ, ನನ್ನ ಮೋಹಾದ, ಎಂಜಲಿನ ಕೊಕ್ಕು.

ಸೂಳೆಮಕ್ಕಳ ಹೆಗಲ ಮೇಲೆ ಕುಳಿತು
ನನ್ನಾಕೆ ಹಾಡಿದಳು ಮೂರು ನಿಮಿಷದ ದರಿದ್ರದ ಹಾಡು,
ಕುಕ್ಕಿದಳು ತನ್ನ ಕುಲಗೋತ್ರದವರ ದೊಡ್ಡಸ್ತಿಕೆಯನ್ನು,
ಆದ್ದರಿಂದ ದಟ್ಟಡವಿಯಲ್ಲಿ ವಿಹರಿಸುವ ನೀವು
ಈಕೆಯ ಕೊಂಕುತನವನ್ನು ಮಾತ್ರ ಕೇಳಬೇಡಿ !

ಗಲ್ಲಿ ಗೂಂಡಾಗಳು ಕತ್ತರಿಸಿದರು ನನ್ನ ಉಗುರು,
ಹಾಕಿದರು ಕೀಳು ಪರಂಪರಾಗತ ಕಾಡಿಗೆಯನ್ನು ಕಂಗಳಲ್ಲಿ,

ನನ್ನ ರೆಕ್ಕೆಗಳಿಂದಲೇ ಬಾಣ ಸಿದ್ಧಪಡಿಸಿ ದೂರ ತಳ್ಳಿದರು,
ಶರಣಾಗತಿಯ ಸುಭಾಷಿತ ಕಲಿಸಿದರು ನನಗೆ,
ತುಂಡು ಮೆಣಸಿಗಾಗಿ ಪಂಜರದಲ್ಲಿ ಸಿಕ್ಕಾಪಟ್ಟೆ ಕುಣಿಸಿದರು,
ಹಕ್ಕಿಗಳೇ ! ಆಗಸದಲ್ಲಿ ಸ್ವಚ್ಛಂದವಾಗಿ ವಿಹರಿಸುವ
ನಿಮ್ಮ ಪ್ರಚಂಡ ಶಕ್ತಿಯನ್ನು ಈಗಲಾದರೂ ಅರಿತುಕೊಳ್ಳಿ
ಮತ್ತು ಬೇರೆ ಏನಾದರೂ ನನ್ನಲ್ಲಿ ಬೇಡಿ.

ಹಕ್ಕಿಗಳೇ ! ಇವರ ಬಲೆ ಬಣ್ಣ ಬಣ್ಣದ್ದು, ಸಂಕೋಲೆ ಕಸುವುಳ್ಳದ್ದು,
ಪ್ರಸಿದ್ಧಿಗಾಗಿ ತುಣುಕು ರೊಟ್ಟಿ ಚೆಲ್ಲುತ್ತಾರೆ.
ನೇಮಿಸುತ್ತಾರೆ ವಿಶ್ವವಿದ್ಯಾಲಯದಲ್ಲಿ, ಮತ್ತು
ಬಾಗಿಲಿಂದ ಬಾಗಿಲಿಗೆ ಜೋಗತಿಯಂತೆ ಅಲೆದಾಡಿಸುತ್ತಾರೆ.
ಸಂಜೆಯ ಮಬ್ಬುಗತ್ತಲಲ್ಲಿ ಕೊಡುಕೊಳ್ಳುವ ವ್ಯವಹಾರ ಕುದುರಿಸುತ್ತಾರೆ.

ಎಲ್ಲೆಡೆ 'ಕ್ರಿರ್ss' ಎನ್ನುವ ಅನುಕೂಲಸಿಂಧು ಧ್ವನಿ.
ನಮ್ಮ ವಸಾಹತಿನ ಸುತ್ತಲೂ ಇಕ್ಕಟ್ಟಾದ ಓಣಿ.
ಹಳೇ ಬೋಳು ಗುಡ್ಡಕ್ಕೆ ತೂಗುಬಿಟ್ಟ ಗೂಡಿನಂತೆ
ಗಿರಣಿಯ ಹೊಗೆ ಕಿಂಡಿಯ ಸಂದಣಿಯಲ್ಲಿ ನಮ್ಮ ಮನಿ.

ಪರಸ್ಪರ ಪತ್ರ ವ್ಯವಹಾರದಿಂದ ನಿರ್ಧರಿಸುತ್ತಾರೆ ಅವರು ನಮ್ಮ ಬೆಲಿ
ವಟವೃಕ್ಷದಲ್ಲಿ ಬೇರೊಂದು ಹಕ್ಕಿ ಕುಳಿತಾಗ ಎಬ್ಬಿಸುತ್ತಾರೆ ಗೊಂದಲದ ಅಲೆ.
ಇಲ್ಲಿಯ ಹಾದಿ....ಚೌಕ... ಸ್ಮಶಾನ....ಸರ್ಕಾರ....ವಿದ್ಯಾಲಯ....
ಪಾಂಡಿತ್ಯ ...ಎಲ್ಲ ಅವರಿಗಾಗಿ....ಕೇವಲ ಅವರಿಗಾಗಿ....

ನಿಮ್ಮ ಆಗಸದೊಳಗಣ ಸ್ವಚ್ಛಂದತೆಯ ಒಂದು ತುಣುಕಾದರೂ
ನನಗಾಗಿ ಮೀಸಲಿಡುವಿರಾ ?
ಉನ್ಮುಕ್ತದ....ಪ್ರಚಂಡ ಆವೇಗದ ಹಕ್ಕಿಗಳೇ ಈಗ ಹೇಳಿ ?
ನಾನೇನು ಮಾಡಲಿ ನಿಮಗಾಗಿ ?
ನಿಮಗಾಗಿ ಹಕ್ಕಿಗಳೇ ?

## ಶಸ್ತ್ರಾಸ್ತ್ರ

ಮೂಲ : ಅಶೋಕ ಬಾಗವೆ
ಅನು. : ಚಂದ್ರಕಾಂತ ಪೋಕಳೆ

[ಅಶೋಕ ಬಾಗವೆ : 1952ರಲ್ಲಿ ಮುಂಬ್ರಾ (ಜಿ–ಠಾಣೆ) ದಲ್ಲಿ ಜನ್ಮ. ಆಂಗ್ಲ ಎಂ.ಎ. ಪದವಿ. ಜ್ಞಾನ ಸದನ ಕಾಲೇಜಿನಲ್ಲಿ ಉಪನ್ಯಾಸಕ (ಠಾಣೆ). ಹಲವು ಮರಾಠಿ ಪತ್ರಿಕೆಗಳಲ್ಲಿ ಕವಿತೆಗಳ ಪ್ರಕಟಣೆ. ಸಂವೇದನಾಯುಕ್ತ ಮನಸ್ಸಿನ ಮುಖಾಂತರ ಜೀವನ ಮೌಲ್ಯದ ಶೋಧನೆ. ಮನುಷ್ಯ-ಮನುಷ್ಯರೊಳಗಿನ ಸಂಬಂಧ ಕಂಡುಕೊಳ್ಳುವ ಪ್ರಯತ್ನ – ಇವರ ಕಾವ್ಯದ ವೈಶಿಷ್ಟ್ಯ.]

ಒಂದು ನಡು ಮಧ್ಯಾಹ್ನ
ನನ್ನನ್ನು ಉಸುಕಿನ ವಿಶಾಲವಾದ ಬಯಲಿನಲ್ಲಿ
ತಂದು ನಿಲ್ಲಿಸಿದರು. ಮತ್ತು ಸುತ್ತಲೂ
ಫಳಫಳ ಹೊಳೆವ ಗುರಿ ಹಿಡಿದು ನಿಂತ ಶಸ್ತ್ರಾಸ್ತ್ರಗಳು.

ಮೊಟ್ಟ ಮೊದಲು ಗಂಟಲು ಒಣಗಿತು.
ಅಸಂಖ್ಯ ಕಾದ ಕಣಗಳು
ಮುಖದ ತುಂಬ ಪಸರಿಸಿದವು.

ಆನಂತರ
ನಿಧಾನವಾಗಿ ಶ್ವಾಸದೊಳಗೆ
ಮಣ್ಣಿನ ಕಣ ಸೇರಿತು.
ಕಣ್ಣುಗುಡ್ಡೆ ಜಡವಾಯಿತು.

ಅವರ ಶಸ್ತ್ರಾಸ್ತ್ರಗಳಿಗೆ
ಕಿಂಚಿತ್ತೂ ತೊಂದರೆಯಾಗದಂತೆ
ನಿಧಾನವಾಗಿ ನಾನು ಕೊಲ್ಲಲ್ಪಟ್ಟೆ.

# ಸೂರ್ಯ ಮೇಯುತ್ತ ಹೊರಟಿದ್ದಾನೆ

ಮೂಲ : ಅಶೋಕ ಬಾಗವೆ
ಅನು : ಚಂದ್ರಕಾಂತ ಪೋಕಳೆ

ಮೋಡಗಳ ಚರ್ಮ ಪಸರಿಸುವಂತೆ
ಸೂರ್ಯ ಮೇಯುತ್ತ ಹೊರಟಿದ್ದಾನೆ
ಮತ್ತು ಹಗಲಿನ
ವಿಲಕ್ಷಣವಾದ ಕಾಮಾಲೆರೋಗ
ಒಳಗಿನ ಪುಪ್ಪುಸವನ್ನು ಕೊರೆಯುತ್ತ
ಹೊರಟಿದೆ.

ರೋಗಿಷ್ಟ ಮನುಷ್ಯನ
ಕ್ಷೀಣವಾದ ಶ್ವಾಸದಂಥ ಗಾಳಿ
ಒಳ-ಹೊರಗೆ ಶತಪಥ ಹಾಕಿ
ಅಸ್ವಸ್ಥಗೊಳಿಸುತ್ತಿದೆ.

ಒಂದು ಮಣ್ಣಿನ ಕಾಲು ಹಾದಿ
ನನ್ನ ಹೃದಯುದಿಂದ ನೇರವಾಗಿ ಹೊರಟು
ಸೂರ್ಯನ ಕಣ್ಣಿನ ದಬ್ಬಣದಂತೆ ಚುಚ್ಚಿ
ಘಾಸಿಗೊಳಿಸುತ್ತಿದೆ.

# ಜನರ ನೂಕು ನುಗ್ಗಲು ; ಶಬ್ದಗಳ ನೂಕು ನುಗ್ಗಲು

ಮೂಲ : ರಜನಿ ಪರೂಳೇಕರ
ಅನು. : ಚಂದ್ರಕಾಂತ ಪೋಕಳೆ

[ರಜನೀ ಪರೂಳೇಕರ : ಮರಾಠಿ-ಸಂಸ್ಕೃತದಲ್ಲಿ ಎಂ.ಎ. ಪದವಿ. ಮಾಜಗಾಂವ್ ಕಾಲೇಜಿನಲ್ಲಿ ಮರಾಠಿ ಉಪನ್ಯಾಸಕಿ. 1985ರಲ್ಲಿ 'ದೀರ್ಘ ಕವಿತಾ' ಕಾವ್ಯ ಸಂಗ್ರಹಕ್ಕೆ ಮಹಾರಾಷ್ಟ್ರ ಸರಕಾರದ ಪಾರಿತೋಷಕ. ಇವರ ಕವಿತೆ ಇಂಗ್ಲಿಷ್, ಗುಜರಾತಿ, ಹಿಂದಿ, ಉರ್ದುವಿನಲ್ಲಿ ಅನುವಾದ. 'ಸಂವಾದ' ಕಾವ್ಯ ಸಂಗ್ರಹ ಪ್ರಕಟಣೆ ಮಾರ್ಗದಲ್ಲಿ. ಮಾನವನ ಮನಸ್ಸಿನ ವಿವಿಧ ಪಾತಳಿಯ ಸಂಶೋಧನೆ, ದರ್ಶನದ ಪ್ರತಿಪಾದನೆ ಇವರ ಕಾವ್ಯದ ಪ್ರಮುಖ ಲಕ್ಷಣ.]

ಜನರ ನೂಕು ನುಗ್ಗಲು, ಶಬ್ದಗಳ ನೂಕು ನುಗ್ಗಲು
ಆಫೀಸು, ಮಾರುಕಟ್ಟೆ, ಬಸ್ಸಿನ ಕ್ಯೂ
ಕಬ್ಬು ನುರಿಸುವ ಚಕ್ರ
ಇಂಥ ಆತ್ಮೀಯ, ಅಗತ್ಯದ ಶಬ್ದಗಳು :
ಆ ಶಬ್ದಗಳ ಮರೆಯಿಂದ ಇಣಕುವ
ಸೂಕ್ಷ್ಮ ಅಸೂಯೆ, ಸಂಪ್ತ ಸ್ವಾರ್ಥ
ತಪ್ಪು ಕಾರಣಕ್ಕಾಗಿ ಸಹಾನುಭೂತಿ,
ಎಂದೋ ನೋಯಿಸಿದ ಅಹಂಕಾರ
ಮತ್ತೊಮ್ಮೆ ಕೇವಲ ಕುತೂಹಲ ;
ಮನುಷ್ಯರ ಕೊಳೆತ ಕಬ್ಬು ಜೀವನದಲ್ಲಿ
ಕಾಣಿಸುವ ಕ್ಷಣ ಕಾಲದ ಮನರಂಜನೆ !

ಜನರ ನೂಕು ನುಗ್ಗಲು, ಶಬ್ದಗಳ ನೂಕು ನುಗ್ಗಲು....
ಗಟ್ಟಿಮುಟ್ಟಾದ ಕಾಳಿನ ನಡುವೆ
ಹುಳುಕು ಬಟಗಡಲೆಯಂತಹ
ಆತ್ಮೀಯ ಶಬ್ದಗಳು: ಮತ್ತು ಅಗತ್ಯದ ಶಬ್ದಗಳು :
ಅದರ ಸಿಪ್ಪೆಯ ಬಣ್ಣ ಹಸಿರು,
ಕಾಳಿನ ಬಣ್ಣ ಹಸಿರು,
ಹುಳುವಿನ ಬಣ್ಣವೂ ಹಸಿರು.

ನೀರಡಿಕೆ ಮತ್ತೆ ಮತ್ತೆ ನೀರಡಿಕೆ
ನೀರಪೇಕ್ಷ, ಗಟ್ಟಿ ಶಬ್ದಗಳ ನೀರಡಿಕೆ :

ಕಬ್ಬು ನುರಿಸುವ ಯಂತ್ರದ ಕೆಳಗೆ ಗ್ಲಾಸು ತುಂಬುತ್ತದೆ
ಮತ್ತೆ ಬರಿದಾಗುತ್ತದೆ.
ಈ ನಡುವೆ ಹಾಸ್ಯ, ವಿನೋದ....ಕರ್ಕಶ ಹಾರ್ನು....
....ಕಬ್ಬಿನ ಸಿಪ್ಪೆ ರಾಶಿ,....ಗ್ಲಾಸುಗಳು ಬರಿದಾಗುತ್ತವೆ....
ಮತ್ತೆ ನೀರಡಿಕೆ.

ಪುನಃ ಗ್ಲಾಸು ತುಂಬುತ್ತದೆ...ನೀರಡಿಕೆಯಾಗುತ್ತದೆ.
ಗ್ಲಾಸಿನ ತುಂಬಾ ನೊರೆ
ಸುತ್ತಲೂ ಪಸರಿಸುತ್ತದೆ ಮಂಜಿನಂತೆ.

ಜನರ ನೂಕು ನುಗ್ಗಲು, ಶಬ್ದಗಳ ನೂಕು ನುಗ್ಗಲು,
ಚಿತ್ರದಲ್ಲಿ ನೋಡಿದಂತೆ ಭಾಸವಾಗುತ್ತದೆ.
ಕೊನೆಗುಳಿಯುವುದು ಕೇವಲ
ಕಬ್ಬಿನ ಯಂತ್ರದ ಗೆಜ್ಜೆಯ ನಿನಾದ
ಮತ್ತು ಕಣ್ಣು ತೇವಗೊಳಿಸುವ
ನಿನ್ನ ಹಸಿರು ಹಸಿರಾದ ನೆನಪು !

## ಜಾಹೀರಾತು

ಮೂಲ : ಅನಿಲ ದ್ರವಿಡ
ಅನು. : ಚಂದ್ರಕಾಂತ ಪೋಕಳೆ

[ಅನಿಲ ದ್ರವಿಡ : 1955ರಲ್ಲಿ ಪುಣೆಯಲ್ಲಿ ಜನ್ಮ. ಇಂಗ್ಲಿಷ್ ಭಾಷೆಯಲ್ಲಿ ಎಂ.ಎ. ಓದು. ಹಲವು ಪತ್ರಿಕೆಗಳಲ್ಲಿ ಕವಿತೆಗಳ ಪ್ರಕಟಣೆ. ರೂಪಕ-ಪ್ರತಿಕಾತ್ಮಕದ ಮುಖಾಂತರ ಕವಿತೆಗಳ ರಚನೆ. ಕಥಾನಕ, ಸಂವಾದ ಧಾಟಿಯಲ್ಲಿ ಕವಿತೆಯ ಬರವಣಿಗೆ. ಕವಿತೆಗಳು ಉಧ್ವಸ್ತ ಹಾಗೂ ಅದರಿಂದ ಉದ್ಭವಗೊಳ್ಳುವ ಕಗ್ಗತ್ತಲೆಯ ಅರಿವನ್ನು ಮಾಡಿಕೊಡುತ್ತವೆ.]

ಚೌಕ ಚೌಕದಲ್ಲಿ ಹಚ್ಚಿದ ಜಾಹೀರಾತು ಓದಿ
ನಾವು ಮನೆಗೆ ಮರಳಿದೆವು.

ರಾತ್ರಿಯಾದ ಬಳಿಕ
ಮಲಗಿದೆವು.

ನಗರವಲ್ಲಿ ಮಧ್ಯರಾತ್ರಿಯ ಹೊತ್ತಿಗೆ
'ಸಾಕಷ್ಟು ಗೊಂದಲ ನಡೆಯಿತಂ.
ಅನಂತರ ನಾನು ಎಚ್ಚರವಾಗಿದ್ದೆ.
ನೀನು ಮಾತ್ರ ಏಳಲೇ ಇಲ್ಲ.

ಮರುದಿನ ನಾನಿದನ್ನೆಲ್ಲ ನಿನಗೆ ಹೇಳಿದೆ.
ನೀನು ಹಕ್ಕಿ ಹಾರಿಹೋದ ಬೋಳು
ಟೊಂಗೆಯಂತೆ ಕಾಣಿಸುತ್ತಿದ್ದೆ.

ಕುಂಡದೊಳಗಿನ ಒಣಗಿದ
ಬಳ್ಳಿ ಕಿತ್ತು ನೀನು ಹೇಳಿದೆ :
ಸಾಯಂಕಾಲ ಹೊಸದೊಂದು ಜಾಹೀರಾತು
ಓದಲು ಹೋಗಿಬೇಕಾಗಿದೆಯೆಂದು.

## ಮೊಲದ ಹೃದಯ, ಆಮೆ ಕಾಲು

ಮೂಲ : ಗುರುನಾಥ ಸಾಮಂತ
ಅನು. : ಚಂದ್ರಕಾಂತ ಪೋಕಳೆ

[ಗುರುನಾಥ ಸಾಮಂತ : 1942ರಲ್ಲಿ ಮುಂಬೈಯಲ್ಲಿ ಜನ್ಮ. 'ಸತ್ಯಕಥಾ' ಮಾಸ ಪತ್ರಿಕೆಯ ಸಹ-ಸಂಪಾದಕ. ಹಲವು ನಿಯತಕಾಲಿಕಗಳಲ್ಲಿ ಕವಿತೆಗಳ ಪ್ರಕಟಣೆ. ಇವರ ಕವಿತೆಗಳಲ್ಲಿ ವ್ಯಕ್ತಿ ಮತ್ತು ಸಮಾಜದ ನಡುವಣ ವೈವಿಧ್ಯಮಯ ಪ್ರವೃತ್ತಿ, ಏಕಾಕಿತನ, ವ್ಯರ್ಥ ವ್ಯಕ್ತಿಗತ ಪ್ರಯತ್ನಗಳ ಚಿತ್ರಣವಿದೆ.]

ಮೊಲದ ಹೃದಯ
ಮತ್ತು ಆಮೆ ಕಾಲಿನಿಂದಲೇ
ಆತ ಇಲ್ಲಿವರೆಗೆ ಈ ಅರಣ್ಯದಲ್ಲೆಲ್ಲ ಸಂಚರಿಸಿದ.
ಕನಸಿನಲ್ಲೊಮ್ಮೆ
ಎಂಟು ಆನೆಗಳು ನುಂಗಿದ್ದನ್ನು ಹೇಳುವಾಗಲೂ ಸಹ
ಯಾವುದೋ ಭಯಂಕರ ತಪ್ಪು ಮಾಡಿದವರಂತೆ
ಆತನ ಕಂಗಳು ಭಯಗ್ರಸ್ತವಾಗುತ್ತವೆ.

# ಹಸ್ತಾಂತರ

ಮೂಲ : ದ. ಭಾ. ಧಾಮಣಸ್ಕರ್
ಅನು. : ಚಂದ್ರಕಾಂತ ಪೋಕಳೆ

[ದ. ಭಾ. ಧಾಮಣಸ್ಕರ್ : ಅಹಮದಾಬಾದಿನಲ್ಲಿ ಜನನ. ಅರ್ಥಶಾಸ್ತ್ರ-ರಾಜ್ಯಶಾಸ್ತ್ರದಲ್ಲಿ ಎಂ.ಎ. ಪದವಿ. ರಿಸರ್ವ್ ಬ್ಯಾಂಕಿನಲ್ಲಿ ಸೇವೆ. ಈಗ ನಿವೃತ್ತಿ. 40 ವರ್ಷಗಳಿಂದ ಕಾವ್ಯ ರಚನೆ. ಇತ್ತೀಚಿನ ಪ್ರಮುಖ ಕವಿಗಳಲ್ಲಿ ಒಬ್ಬರು. 'ಪ್ರಾಕ್ತನಾಚಿ ಸಂದರ್ಭ' ಈ ಕಾವ್ಯ ಸಂಗ್ರಹಕ್ಕೆ 'ಕೇಶವಸುತ' ಪ್ರಶಸ್ತಿ. ಜ್ಞಾನಪೀಠ ಪ್ರಕಾಶನದ ಕಾವ್ಯ ಸಂಗ್ರಹದಲ್ಲಿ (ಐದು ಮರಾಠಿ ಕವಿಗಳಲ್ಲಿ) ಇವರ ಕವಿತೆಗಳ ಆಯ್ಕೆ. 'ಸಮಕಾಲೀನ ಭಾರತೀಯ ಸಾಹಿತ್ಯ' (ಸಾ. ಅ. ಪ್ರಕಟಣೆ) ಇವರ ಕವಿತೆಗಳ ಸಮಾವೇಶ. ಇವರ ಕವಿತೆ ಹಳೆ-ಹೊಸದರ ಸಮನ್ವಯ.]

ವಿಸರ್ಜನೆಗಾಗಿ ಗಣಪನನ್ನು ಹೊತ್ತೊಯ್ಯುವಾಗ
ಮೂರ್ತಿ ತುಂಬಾ ಭಾರವೆನಿಸಿತು.
ಬಿಸಿರಕ್ತದ ತರುಣಮಗ
'ನಾನೆತ್ತಿ ಕೊಳ್ಳುತ್ತೇನೆ' ಎಂದ.

ನಾನು ಆತನ ಕೈಗೆ ಪೀಠ ಸಮೇತ
ಮೂರ್ತಿಯನ್ನು ತಾತ್ಕಾಲಿಕವಾಗಿ ಕೊಟ್ಟೆ.
ಮಗ ಮೂರ್ತಿಯನ್ನು ಹಿಡಿದ
ತುಂಬಾ ಜಾಗರೂಕತೆಯಿಂದ.
ಆಗ ನನಗಾಯ್ತು
ಪರಂಪರೆಯನ್ನು ಮುಂದುವರೆಸಿದ
ದೈವೀ ಆನಂದ....

ನಾನು ಮತ್ತೆ ತರುಣನಾದೆ ಯಯಾತಿಯಂತೆ,
ನನ್ನ ಮಗ ಮಾತ್ರ ಪರಂಪರೆಯ ಭಾರದಿಂದ
ಕುಸಿದ ಚೊಕ್ಕ ಮುದುಕನಾದ.

## ಇದೆಲ್ಲವೂ ತುಂಬಾ ಅಗತ್ಯ

ಮೂಲ : ದ. ಭಾ. ಧಾಮಣಸ್ಕರ್
ಅನು. : ಚಂದ್ರಕಾಂತ ಪೋಕಳೆ

ಚೈತ್ರ ಯಾವಾಗ ಎಂದು ನಾನು ಪಂಚಾಂಗಿಗೆ ಪ್ರಶ್ನಿಸಲೇ ಇಲ್ಲ.
ಅದಕ್ಕಿಂತ ನನಗೆ ವಿಶ್ವಾಸ ಹಸಿರುಗಿಡದ ಚಿಗುರಿನಲ್ಲಿ.
ಇಂಥ ಪ್ರಶ್ನೆಗಳನ್ನು ಸರ್ವಸಾಕ್ಷಿಯಾದ ಆಕಾಶಕ್ಕೆ ಕೇಳಬೇಕು.
ಎಂದೂ ಗ್ರಹ-ತಾರೆಗಳನ್ನು ಪ್ರಶ್ನಿಸಲೇ ಕೂಡದು
ಎಂಬ ಅರಿವು ಅನಂತರ ಮೂಡಿದ್ದು
ಬಹಳ ಒಳ್ಳೆಯದಾಯ್ತು.
ಗಿಡದ ಪ್ರಶ್ನೆ ಗಿಡಕ್ಕೇ ಕೇಳಬೇಕು, ಹಕ್ಕಿಗಳದ್ದು ಹಕ್ಕಿಗಳಿಗೆ,
ಅದಕ್ಕಿಂತ ಮೊದಲು ಓದಿದ್ದನ್ನೆಲ್ಲ ಗಾಳಿಯಲ್ಲಿ ತೂರಿಬಿಡಬೇಕು.
ಸ್ವಂತಕ್ಕೆ ಇದೆಲ್ಲ ತುಂಬಾ ಅಗತ್ಯ.

## ಕುಂತಿ

ಮೂಲ : ದ. ಭಾ. ಧಾಮಣಸ್ಕರ್
ಅನು. : ಚಂದ್ರಕಾಂತ ಪೋಕಳೆ

ನಿರಪೇಕ್ಷ ನಪುಂಸಕ ಮಹಾರಾಣೀ ಪಟ್ಟಕ್ಕಿಂತ ಮೊದಲು
ಪ್ರತಿಯೊಬ್ಬರಿಗೂ ತನ್ನ ಕೌಮಾರ್ಯದಲ್ಲಿ ನಿಲ್ಲುತ್ತದೆ
ಸೂರ್ಯನ ಗರ್ಭ.
ವ್ಯತ್ಯಾಸವಿಷ್ಟೇ, ಆಕೆಗಿತ್ತು ಪ್ರತಿಸೂರ್ಯನನ್ನು
ಬೆಳೆಸುವ ತಾಕತ್ತು.
ಗಂಗೆಯಲ್ಲಿ ತೇಲಿ ಬಿಡುವ ನಿರ್ಮೋಹ.
ಎಲ್ಲರಲ್ಲೂ ಇರುವುದಿಲ್ಲ.

ಹಿರಣ್ಯಗರ್ಭ ಸಾಕುವಂಥ
ಜಬರ್ದಸ್ತಾದ ಗರ್ಭ ಯಾರಿಗಿದೆ ಹೇಳಿ ?
ಅದಕ್ಕೆಂದೇ ಈ ಅಸಂಖ್ಯಾತ ನಿರಪರಾಧಿ ಗರ್ಭಪಾತ
ದಿಕ್ಕು ಕೆಂಪಾಗಿಸುವ ಮುಂಜಾವು, ಸಂಧ್ಯಾಕಾಲ....
ಅದಕ್ಕಾಗಿಯೇ ಅಲ್ಲವೇ ಈ ವಸ್ತ್ರಾಪಹರಣ....
ದೈವ ಉರುಳಿಸುವ ದಾಳದ ಪ್ರಾಣಸಂಕಟ....
ಅಜ್ಞಾತವಾಸದ ವಿರಾಟ ವನವಾಸ....
ಫಜೀತಿ ಮಾಡುವ ಮಾಯಾವೀ ಇಂದ್ರಪ್ರಸ್ಥ....
ವೌಲ್ಯದ ಅಣುಭಟ್ಟಿಯೊಳಗೆ
ತನ್ನೊಂದಿಗೇ ನಡೆವ ಯುದ್ಧದ ಪ್ರಸಂಗ....
ಮತ್ತು ಕೇವಲ ಸ್ವರ್ಗದ ಹೊಸ್ತಿಲಲ್ಲೇ ಮರಣ....
ಅನಂತರವಿಲ್ಲ.... ಅಂದರೆ ಎಲ್ಲವೂ ಸ್ತಬ್ಧ....

[ಶ್ರೀಮತಿ ಎಂ. ಆರ್. ಕಮಲಾ ಅನುವಾದಿಸಿರುವ ನೀಗ್ರೋ ಕವಯಿತ್ರಿಯರ ಹತ್ತು ಕವಿತೆಗಳನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ. ಈ ಕವಿತೆಗಳು, ಕಮಲಾ ಅವರು ಸೂಚಿಸುವಂತೆ, ದೈನಂದಿನ ಬದುಕಿನ ಪ್ರೀತಿ-ವಿರಹ, ರಾಗ-ದ್ವೇಷ, ಹತಾಶೆ-ನಿರಾಶೆ, ಉತ್ಕರ್ಷ-ವಿದಾಯ ಇಂಥ ಸಹಜ ಭಾವನೆಗಳ ಭಾವಗೀತಾತ್ಮಕ ಅಭಿವ್ಯಕ್ತಿಗಳಾಗಿವೆ. ನೀಗ್ರೋ ಕವಿಯಿತ್ರಿಯರ ಮನೋಜಗತ್ತು ಮತ್ತು ಕಾವ್ಯರಚನಾ ಕ್ರಮವನ್ನೂ ಈ ಕವಿತೆಗಳು ಸ್ಥೂಲವಾಗಿಯಾದರೂ ಕನ್ನಡ ಓದುಗರಿಗೆ ಪರಿಚಯಿಸುತ್ತವೆ ಎಂದು ಭಾವಿಸುತ್ತೇವೆ. —ಸಂ.]

## ಅಮಲ

1

ಗರ್ಭಪಾತಗಳು ಮರೆಯಿಸುವುದಿಲ್ಲ –
ನೀನು ಪಡೆದುಕೊಂಡ, ಕಳೆದುಕೊಂಡ ಕಂದಮ್ಮಗಳನ್ನು,
ಆಕಾರಗೊಳ್ಳದ ಎಳೆಮುದ್ದೆಗಳನ್ನು;
ಪ್ರಜ್ವಲಿಸದೆ ಹೋದ ಪ್ರತಿಭೆಗಳನ್ನು,
ನೀನವುಗಳನ್ನು ಹೊಡೆಯಲಾಗುವುದಿಲ್ಲ,
ಬೆಲ್ಲಕೊಟ್ಟು ಮುಂದ್ದಿಸಲಾಗುವುದಿಲ್ಲ,
ಬೆರಳು ಚೀಪುವುದನ್ನು ಬಿಡಿಸಲಾಗುವುದಿಲ್ಲ,
ಕೊಮ್ಮ ಭೂತಗಳ ತಡೆಯಬುವುದಕ್ಕೆ
ಬೆಳಕಿಂಡಿ ಮುಚ್ಚಲಾಗುವುದಿಲ್ಲ,
ಬಯಕೆ ತಿನಿಸುಗಳ ತಿನ್ನುವಾಗಲೂ
ನೀನವುಗಳನ್ನು ಬಿಡಲಾಗುವುದಿಲ್ಲ.

2

ಗಾಳಿರವದಲ್ಲೂ ನನ್ನ
ಕೊಂದ ಕಂದಮ್ಮಗಳ ಕೂಗು ಕೇಳಿದ್ದಿದೆ.
ಹಾಲು ಕುಡಿಯದೆ ಕಳೆದ ಭ್ರೂಣಗಳು
ನನ್ನ ಎದೆಭಾರವ ಕುಗ್ಗಿಸಿವೆ,
ಹಲವೊಮ್ಮೆ ನಿರಾಳಗೊಳಿಸಿವೆ.

ನಾನು ಹೇಳಿದ್ದೇನೆ –
ಕೋಮಲ ಕಂದಮ್ಮಗಳೇ
ನಾನು ಪಾಪಮಾಡಿದ್ದರೆ
ನಿಮ್ಮ ಅದೃಷ್ಟರೇಖೆ ಅಳಿಸಿಹಾಕಿದ್ದರೆ
ನಿಮ್ಮ ಬಿಸಿಕಣ್ಣೀರನ್ನು, ಆಟಪಾಟವನ್ನು
ಪ್ರೇಮಾಂತಃಕರಣಗಳನ್ನು, ವೈವಾಹಿಕ ಸಂಘರ್ಷಗಳನ್ನು
ಸಾವು-ನೋವುಗಳನ್ನೂ ಕದ್ದಿದ್ದರೆ
ನಿಮ್ಮ ಮೊದಲ ಉಸಿರಿಗೇನೆ ವಿಷತುಂಬಿದ್ದರೆ
ದಯವಿಟ್ಟು ನನ್ನ ನಂಬಿ, ದಯವಿಟ್ಟು ನನ್ನ ನಂಬಿ
ಇದೆಲ್ಲವನ್ನೂ ನಾನು ಬೇಕೆಂದೆಮಾಡಿದ್ದರೂ
ನನಗದು ಬೇಕೇ ಇರಲಿಲ್ಲ.
ಹಾಗಾಗಿ ನನ್ನದಲ್ಲದ ತಪ್ಪಿಗೆ ನಾನೇಕೆ ಅಳಲಿ ಹೇಳಿ ?
ಈಗ ನೀವಿಲ್ಲ–ಅಥವಾ ನೀವು ನೀವಾಗಲು ಬಿಡಲಿಲ್ಲ ನಾನು
ನನಗದು ತಪ್ಪೆನಿಸಿದರೂ ಹಲವೊಮ್ಮೆ.
ಕಠೋರ ಸತ್ಯಗಳ ಹೇಳಲಾಗುವುದಿಲ್ಲವಲ್ಲ ? !
ನೀವು ಹುಟ್ಟಿದ್ದಿರಿ. ನಿಮಗೊಂದು ರೂಪವಿತ್ತು, ಅಳಿದಿರಿ.
ನಿಮಗೆಂದೂ ನಗಲಿಕ್ಕೆ - ಅಳಲಿಕ್ಕೆ ಆಗಲೇ ಇಲ್ಲ
ನನ್ನನ್ನು ನಂಬಿ –
ನಾನು ನಿಮ್ಮನ್ನೆಷ್ಟು ಹಚ್ಚಿಕೊಂಡಿದ್ದೆ, ಪ್ರೀತಿಸಿದ್ದೆ.
ನನ್ನನ್ನು ನಂಬಿ –
ನೀವು ನಂಗೆ ಅಸ್ಪಷ್ಟವಾಗಿದ್ದರೂ
ನಾನು ನಿಮ್ಮನ್ನು ಹಚ್ಚಿಕೊಂಡಿದ್ದೆ, ಪ್ರೀತಿಸಿದ್ದೆ,
ಹಲವು ಕನಸುಕಂಡಿದ್ದೆ,
ದಯವಿಟ್ಟು ನನ್ನನ್ನು ನಂಬಿ –

ಗ್ವಾಂದೆಲೀನಾ ಬ್ರೂಕ್ಸ್

# ನೆಮ್ಮದಿ

ನನ್ನ ಖೋಲಿಯ ಕಿಟಕಿ ತೆರೆದರೆ
ಕಣ್ಣು ಹಾಯುವಷ್ಟು ಗಿಡಬಳ್ಳಿ ಮರಗಳು,
ಕಾಣುತ್ತೇನೆ-
ಎಳೆ ಚಿಗುರು ದಟ್ಟ ಹಸಿರಾಗುವುದನ್ನು ;
ಋತುಮಾನಗಳು ಹಾದು ಹೋಗುವುದನ್ನು.

ಉಜ್ವಲ ಶರದೃತು ಕಾಲಿಡುತ್ತದೆ
ಕಡುನೀಲಿ ಆಗಸದ ಹಿನ್ನೆಲೆಯಲ್ಲಿ ಹೊಳೆಯುತ್ತವೆ-
ಎಳೆಬಿಸಿಲಿನಲ್ಲಿ ತೊಯ್ದು ಹಳದಿ ಎಲೆಗಳು.

ಮಾಂತ್ರಿಕ ಮಧ್ಯಾಹ್ನದಲ್ಲಿ
ಮನಸ್ಸಿರದ ಮನಸ್ಸಿನಲ್ಲಿ
ಉದುರಿದ ಹೊನ್ನೆಲೆಗಳು
ರಸ್ತೆಗಳಿಗೆ ಸುನೇರಿ ಹಚ್ಚುತ್ತವೆ.



ಶಿಶಿರದಾಗಸಕ್ಕೆ ಮುಖತೆರೆದು ನಿಲ್ಲುತ್ತವೆ
ಬೂದು-ಬೋಳು ಕೊಂಬೆ ರೆಂಬೆಗಳು
ಜೇಡ ಬಲೆ ಹೆಣೆದಂತೆ ಸೂರ್ಯಾಸ್ತದ ಕೆಂಪಿಗೆ,
ಹಲಪ್ರೊಮ್ಮೆ ಹುಣ್ಣಿಮೆಯ ಚಂದ್ರನಿಗೆ.

ಕತ್ತಲನ್ನಾಳುತ್ತದೆ–ಒಂಟಿ ಬೆಳ್ಳಿಚುಕ್ಕಿ
ಅಥವ ಬೂದಿ ಎರಚಿದಂತೆ
ಮಿನುಗುತ್ತವೆ ನಕ್ಷತ್ರಗೊಂಚಲು.

ಅಪ್ಪಳಿಸುತ್ತದೆ ಬಿರುಗಾಳಿ ಬೋಳು ಮರಗಳನ್ನು
ರಾಚುತ್ತದೆ ಕಠಿಣಾಘಾತದಿ

ನಿರ್ದಯಿ ಮುಂಗಾರು ಮಳೆ
ಆದರೂ ಈ ಮರ ನಿಲ್ಲುತ್ತೆ, ನಿಲ್ಲುತ್ತದೆ.



ನನ್ನ ಅಸ್ವಸ್ಥ ಬದುಕು ಅಗಾಂತಗೊಳ್ಳುತ್ತದೆ
ಎದೆ ಬಿರಿವ ಯಾತನೆಯಲ್ಲಿ
ಅಪರಿಪೂರ್ಣತೆ, ಅತೃಪ್ತಿಯ ಆಳ್ವಿಕೆಯಲ್ಲಿ
ಹೀಗಾಗಿ—

ನನ್ನ ಕಿಟಕಿಯಗಲದ ಆಕಾಶಕ್ಕೆ,
ಗಿಡ, ಮರ, ಬಳ್ಳಿಗೆ, ಬದಲಾಗುವ ಋತುಮಾನಕ್ಕೆ
ಅವು ತಂದೀವ ನೆಮ್ಮದಿ-ಸಾಂತ್ವನಕ್ಕೆ :
ಋಣಿಯಾಗಿದ್ದೇನೆ.
ಈ ನಿತ್ಯ-ನಿರಂತರ ಸ್ಥಿರ ಪ್ರಕೃತಿ
ದುಗುಡ, ದುಮ್ಮಾನಗಳ ನುಂಗುತ್ತದೆ
ನುಂಗಿ, ನೋವಿರದ–ನೆನಪಿರದ
ನಿರಾಕುಲತೆಯನ್ನಷ್ಟೇ ಉಳಿಸುತ್ತದೆ,

ಕ್ಲಾರಿಸಾ ಸ್ಕಾಟ್ ಡಿಕಿಸಿ

## ಪತ್ನಿಯು ಪ್ರೇಮಪತ್ರ

ನೀನಿಟ್ಟ ಹೆಜ್ಜೆಗುರುತುಗಳ ಬರಿಗಾಲಲ್ಲಿ ಹುಡುಕಿ ಹೊರಡುವೆ
ನಿನ್ನ ಬರಿದಾದ ಬಟ್ಟಲಿಗೆ ನನ್ನ ತುಟಿಯನ್ನೊತ್ತುವೆ,
ಬಿಸಿ ಆರಿದ ನಿನ್ನ ಬಟ್ಟೆಗಳ ಸ್ಪರ್ಶಿಸಬಯಸುವೆ,
ನೀ ಕಂಡ ಗಿಡ ಮರಬಳ್ಳಿ, ನಾ ಕಾಣಬಯಸುವೆ
ನಿನ್ನ ಹೆಸರನೆ ಬರೆದು, ಬರೆಬರೆದು ಬರೆಯುವೆ,
ನಾವಾಡಿದ ಪ್ರೀತಿ ಪಿಸುಮಾತುಗಳ ತಾಲೀಮು ನಡೆಸುವೆ
ನಿನ್ನ ಕಣ್ಣುಗಳೇ ಕೊಟ್ಟ ಭಾಷೆಗಳ ಸ್ಮರಿಸಿಕೊಳ್ಳುವೆ.
ಮನೆತೊರೆವ ಮುನ್ನ ನೀನಿತ್ತ ಮುತ್ತುಗಳು
ನನ್ನೆದೆಯಲ್ಲಿನ್ನೂ ಹೊರಳಾಡುತ್ತಿವೆ ;
ಸೋತ ಹೃದಯದೊಂದಿಗೆ ಕಾಲಳೆಯುತ್ತ ನಾನು
ದಿನ ರಾತ್ರಿಗಳನು ದರ್ಶಿಸುವೆ.

ನನ್ನ ತ್ರಾಣದ ಅರ್ಥ ಕುಂದಿಹೋಗಿದೆ ನಿನ್ನ ನಿರ್ಗಮನದೊಂದಿಗೆ
ಇನ್ನರ್ಥಹಾಗೆ ಉಳಿದಿದೆ ನಿನ್ನ ನಿರೀಕ್ಷೆಯೊಂದಿಗೆ.

ಕರೋಲೀನ್ ರೀಸಿ

## ಮುಖವಾಡ

ಎಷ್ಟು ತಣ್ಣಗಿನ ನಿರ್ಲಿಪ್ತ ಹೆಣ್ಣಿವಳು !
ಕಡುಯಾತನೆಯಲ್ಲಿ ತಾನು ಕಳೆದ ದಿನಗಳನ್ನು
ಆತ್ಮದೊಳಗಣ ಗಂಟುಗಳನ್ನು ರಟ್ಟಾಗಿಸಲು ಬಿಡಳು.

ಇಡೀ ಜಗತ್ತನ್ನು ಕುಹಕದ ಕಣ್ಣಿಂದ ಕಾಣುತ್ತಾಳೆ
ಭಾವನೆಗಳ ತೊನೆದಾಟವನ್ನು ಕಾಲಿನಿಂದೊದ್ದು
ಧಿಕ್ಕರಿಸುತ್ತಾಳೆ,
ನಿಟ್ಟುಸಿರು-ಕಣ್ಣೀರನ್ನೆಲ್ಲ ಅವಹೇಳನ ಮಾಡುತ್ತಾಳೆ.

ಆದರೊಮ್ಮೆ—ಪುಟ್ಟ ಕಂದನ ಎತ್ತಿಕೊಂಡ ಹೆಣ್ಣೊಬ್ಬಳು
ಹಾದಿಯಲ್ಲಿ ಇವಳ ಬಳಿ ಹಾದುಹೋದಳು.
ಇನ್ನೊಮ್ಮೆ—ಪ್ರಾಸಂಗಿಕವಾಗಿ ಯಾರದೋ ಬಾಯಿಂದ
ವ್ಯಕ್ತಿಯೊಬ್ಬನ ಹಿಸಿ-ಕಹಿ ಹೆಸರನ್ನು ಕೇಳಿದಳು.

ನಿಗ್ರಹಗೊಳಿಸುವಷ್ಟು ಹಂಬಲಿಕೆ ಅವಳ ಕಣ್ಣಾಲಿಯಲ್ಲಿ
ಅಷ್ಟೇ ನೋವು ಅವಳ ಮುಖದಲ್ಲಿ.
ನಾನಿತ್ತ ತಿರುಗಿದೆ—ಅವಳ ಮುಖವಾಡ ಕಳಚುವನಕ.

ಕ್ಲಾರಿಸಾ ಸ್ಕಾಟ್ ಡಿಲನಿ

## ಕ್ರಿಸ್‌ಮಸ್ ಕಾಣಿಕೆ....

ಕ್ರಿಸ್‌ಮಸ್ ದಿನದ ಮುಂಜಾವು—
ಎಲ್ಲರಿಗಿಂತ ಮೊದಲೇ ಎದ್ದು
ದಡಬಡಿಸಿ ಓಡಿದೆ ಮುಂಭಾಗದ ಕೋಣೆಗೆ :

ಅಜ್ಜಿ ಹೊಲಿಯುತ್ತಿದ್ದಳಾ
ಹೊಚ್ಚ ಹೊಸಗುಂಡಿಯಾ
ನನ್ನ ವರುಷದಷ್ಟು ಹಳೆಯ
ಪರಕು ಗೊಂಬೆಗೆ.

ಕೆರೋಲ್ ಫ್ರೀಮನ್

## ಮತಾಂಧನಿಗೆ ಚರಮವಾಕ್ಯ

ಮತಾಂಧನಿಗೆ ಬದುಕೊಂದು ಚಾವಟಿ
ನಂಬಿಕೆಗಳನ್ನು ; ಸಾಮಾನ್ಯರನ್ನು ಥಳಿಸುತ್ತದೆ ಅದು

ಇಲ್ಲಿ, ಚಾವಟಿಯು ಹಿಡಿತ ಕಳಕೊಂಡವನೊಬ್ಬ
ನಿರಾಶ್ರಿತನಂತೆ ಮಲಗಿದ್ದಾನೆ
ಸೋತು ಸಾವಿಗೆ ಶರಣಾಗಿದ್ದಾನೆ.

ದರೋತಿವೇನಾ ಜಾನ್ಸನ್

## ಪ್ರಾರ್ಥನೆ

ದಟ್ಟ ಕಾಡಿನಲಿ, ಸುರಿವ ಸೋನೆಯಲಿ
ಮಣ್ಣ ಕಣಕಣದ ಬೆಚ್ಚನೆಯ ಸ್ಪರ್ಶದಲಿ
ಹೂಳಿಬಿಡಿರಿ ಈ ನನ್ನ ದೇಹ....
ಕೊಂಬೆ, ರೆಂಬೆಗಳ ಕೆಸರಿನಲಿ ಅದ್ದಿ
ನನ್ನ ಗೋರಿಯ ಮೇಲೆ ಚಿತ್ರಿಸಿರಿ :

'ಚಂದ್ರಿಕೆಯ ಸ್ಪರ್ಶದಮಲಿನಲಿ
ಪ್ರೀತಿ ಕಬಳಿಸುವ ನಲ್ಲ ನಲ್ಲೆಯರ
ನೂರು ಮಾತುಗಳ ಮುತ್ತುಗಳ ವಿನಿಮಯದ
ಉನ್ಮತ್ತ ಕೆಳೆಯರ....'

ನನ್ನ ಗೋರಿಯು ಸವರಿ ನುಣ್ಣಗಾಗಿಸಬೇಡಿ
ಕಲೆರಹಿತ ಕನ್ನೆ ಹಾಸಿಗೆಯಂತೆ ಶುಭ್ರಗೊಳಿಸಬೇಡಿ
ಅಂಕೆ-ಶಂಕೆಗಳ ಮೀರಿ ಮೀರಿ ಬೆಳೆಯಲಿ ಅಲ್ಲಿ
ಕಳೆ, ಕಾಡುಗಿಡ, ಚಿಗುರು ಹೂ ಹಂದರ
ನನ್ನ ನೆತ್ತಿಯ ಮೇಲೆ ಬೆಳೆಯಲಿ ಬೆಳೆಬೆಳೆದು ನಿಲ್ಲಲಿ.

ಹೆಲೆನ್ ಜಾನ್‌ಸನ್

## ಬಡತನದ ನಂಟು

ಬಡತನವೊಂದಿಗೆ ಹೆಜ್ಜೆ ಹಾಕದ ನಿನಗೆ
ಅರ್ಥವಾಗುವುದಿಲ್ಲ ಆಕೆಯ ರೂಪು-ರೇಖೆಗಳು,
ಉದ್ದ ಅಗಲ ಆಳ ವಿಸ್ತಾರಗಳು.
ಗುಳಿಬಿದ್ದ ಕಣ್ಣಿಗೆ; ಬತ್ತಿದ ಕೆನ್ನೆಗೆ
ನಿನ್ನ ಬೆರಳುಗಳ ಒಯ್ಯಲು ಮಾರ್ಗದರ್ಶಕರಾರು ಇರುವುದಿಲ್ಲ;
ನಿನ್ನ ಮಂದ್ದು ಮುಖದ ಹೆಂಡತಿ
ಸೊರಗಿ ಕೃಶಾಂಗಿಯಾಗಿ-ಎದೆಬತ್ತಿ ಒಣಗಿ
ಬಡತನದ ರೂಪುರೇಖೆಗಳು ಆಕೆಯ ಮುಖದಲ್ಲಿ ಮೂಡುವವನಕ.

ಎಲ್ಲೋ ದೂರದ ಅಪರಿಚಿತ ಜನ ನಾಡು ನಗರದಲ್ಲಿ
ಪರಕೀಯ ಮುಖಗಳಲ್ಲಿ, ಕಂಡ ಸುದ್ದಿ ತುಣುಕುಗಳಲ್ಲಿ
ಊಟವಿರದ ಖಾಲಿಗಂಗಳಲ್ಲಿ
ನಿರ್ಜೀವ ಕಪ್ಪು ಕೈಗಳಲ್ಲಿ ಎದ್ದು ಕುಣಿವ ಬಡತನ
ಒಂದು ಕರಾಳರಾತ್ರಿ-
ಕಿಟಕಿಯಾಚೆ ನೀನು ಇಣುಕಿದಾಗ
ನಿನ್ನ ಹಿತ್ತಲಿನಲ್ಲಿ ಚಕ್ಕಳಮಕ್ಕಲ ಹಾಕಿ
ಕೂತ ದೃಶ್ಯ ಕಾಣುತ್ತದೆ.

ಮರುಂ ಬೆಳಗು—
ಕನ್ನಡಿಯಲ್ಲಿ ನಿನ್ನ ನೀನು ದಿಟ್ಟಿಸಿದಾಗ
ಬಡತನ ನಿನಗೆಂದೂ ಪರಕೀಯ ಅನಿಸುವುದಿಲ್ಲ.
ಅದೀಗ ನಿನ್ನನ್ನೇ ಒಡೆಯನನ್ನಾಗಿಸಿಕೊಂಡು
ಹೆಗಲೇರಿ ಕೂತಾಗ ನಿನ್ನ ಕಥೆಯ ಹಾದಿತಪ್ಪಿ
ಹೆಂಡತಿಯ ದನಿ ಕರ್ಕಶವಾದಂತೆ ಭಾಸವಾಗುತ್ತದೆ.

ಇನ್ನು ನೀನು, ನಿನ್ನವರು, ಸೊಗದ ಸವಿಯ
ಬದುಕ ಬದುಕಲಾರಿರಿ–
ಬರಿಯ ಬದುಕನಷ್ಟೆ 'ಬದುಕ' ಬಲ್ಲಿರಿ.

ಲೂಸಿ ಸ್ಮಿತ್

# ಕ್ಷಣಿಕ

ರಾತ್ರಿ ಇರುವುದು ನಿದ್ರಿಸುವುದಕ್ಕೆ; ವಿಶ್ರಮಿಸುವುದಕ್ಕೆ
ತೆಳುಗಾಳಿ ತೆಳ್ಳಗೆ ಬೀಸುವುದಕ್ಕೆ; ಸುಯ್ಯಲಿಡುವುದಕ್ಕೆ–

ಈ ರಾತ್ರಿ ಇರುವುದು ಕೊರಗಿ ಕಣ್ಣೀರಿಡುವುದಕ್ಕಲ್ಲ
ಹಾಗಿರುವಾಗ ನಾನೇಕೆ ಅಳಲಿ-ನೀವೇ ಹೇಳಿ ?

ಎಲೆಎಲೆಗಳ ತೀಡಿ ತೂರಿಬರುವ
ಮಧುರ ಗಾಳಿಯಲೆಯ ಆಲಿಂಗನ
ಇದೆ ಎಷ್ಟು ಬೆಚ್ಚಗೆ,

ಈ ರಾತ್ರಿ ಎಷ್ಟೊಂದು ದಯಾಳು;
ನನ್ನಾತ್ಮದ ಸೋಲನೆಲ್ಲ ಮುಚ್ಚಿಡುವ ಕರುಣಾಳು.

ಒಂದು ವಿಷಗಳಿಗೆ-
ನನ್ನಿಡಿ ನಲುಗಿಸಿ, ನಡುಗಿಸಿ
ಹತಾಶೆಯ ಕಂದಕಕೆ ತಳ್ಳಿದರೇನಾಯಿತು ?

ಮುಂದಿದೆ ಇನ್ನೊಂದು ಹೊಸದಿನ
ಧೃತಿಗೆಡದೆ ಧೈರ್ಯದಲಿ ಎದುರಿಸುವೆನು ಎಲ್ಲ, ಎಲ್ಲ.

**ಕ್ಲಾರಿಸಾ ಸ್ಕಾಟ್ ಡಿಲ್ಯಾನಿ**

# ಯವ್ವನದ ಹಾಡು

ಗೆಣೆಯಾ,

ಗರಕೀಯ ಎಸಳಾಗ ಇಬ್ಬಾನಿ ಮಣಿಗಳು
ಅಬ್ಬಲಿಯ ಹುವ್ವ ತಬ್ಬೀದ ಕೆಂಪು
ಯವ್ವನದ ಆ—ವೇಗ
ಚೈತ್ರಾದ ಉಲ್ಲಾಸ
ಚದುರೀತು ನೆರಳು
ಸರಿದೀತು ಸಂತಾಸ....

ಹೊಳದೀತು ಬಾನು
ಚಿಗರೀತು ಕಾನು
"ಬರಲುಂಟೆ ಸುಗ್ಗಿ ಮತ್ತೆ ?"

**ಜಾರ್ಜಿಯಾ ಡೊಗ್ಲಾಸ್ ಜಾನ್ಸನ್**

# ತಮ್ಮ ಧೃವಸ್ವಾಮಿನಿ ನಾಟಕಕ್ಕೆ ಜಯಶಂಕರ 'ಪ್ರಸಾದ'ರ ಮುನ್ನುಡಿ

ಅನು : ಎಚ್.ಎನ್. ದ್ವಾರಕಾನಾಥ

ಗುಪ್ತರ ಆಳ್ವಿಕೆಯ ಸಂದರ್ಭದಲ್ಲಿ ರಾಮಗುಪ್ತನೆಂಬುವನಿಂದ ಅವನ ಹೆಂಡತಿ ಧೃವಸ್ವಾಮಿನಿಯನ್ನು ಚಂದ್ರಗುಪ್ತನು ರಕ್ಷಿಸಿ ಪುನರ್ವಿವಾಹವಾಗಿದ್ದನೆಂಬುದಕ್ಕೆ ಐತಿಹಾಸಿಕ ದಾಖಲೆಗಳಿವೆ. ಹಿಂದಿ ಭಾಷೆಯ ಖ್ಯಾತ ಲೇಖಕ ಜಯಶಂಕರ ಪ್ರಸಾದರು ಮಹಿಳಾವಾದಿ ದೃಷ್ಟಿಕೋನದಿಂದ ಈ ಸಂದರ್ಭವನ್ನು ಬಳಸಿಕೊಂಡು ನಾರದ ಹಾಗೂ ಪರಾಶರರ ಸ್ಮೃತಿಗಳು, ಕೌಟಿಲ್ಯನ ಅರ್ಥಶಾಸ್ತ್ರ ಮುಂತಾದುವನ್ನು ಪರೀಕ್ಷಿಸಿ ನೋಡಿದ್ದಾರೆ. ಅವರು ಈ ಉದ್ದೇಶದಿಂದ ರಚಿಸಿದ 'ಧೃವಸ್ವಾಮಿನೀ' ಎಂಬ ನಾಟಕದ ಮುನ್ನುಡಿಯ ಕೆಲವು ಅಂಶಗಳನ್ನು ಅನುವಾದಿಸಿ ಇಲ್ಲಿ ಕೊಡಲಾಗಿದೆ :

ವಿಶಾಖದತ್ತನು ರಚಿಸಿದ 'ದೇವೀ ಚಂದ್ರಗುಪ್ತ' ಎಂಬ ನಾಟಕದ ಕೆಲವಂಶಗಳು 'ಶೃಂಗಾರ ಪ್ರಕಾಶ' ಹಾಗೂ 'ನಾಟ್ಯದರ್ಪಣ'ದ ಮೂಲಕ ಐತಿಹಾಸಿಕ ಸಂಚಿಕೆಗಳಲ್ಲಿ ಉಲ್ಲೇಖಗೊಂಡವು. ಈ ವಿಷಯವಾಗಿ ವಿದ್ವಾಂಸರು ಬಿಸಿ-ಬಿಸಿ ಚರ್ಚೆ ನಡೆಸಿದರು. ಚಂದ್ರಗುಂಪ್ತ–ಧೃವಸ್ವಾಮಿನಿಯರ ಪುನರ್ಮಿಲನದ ವಿಷಯ ಸಾಂಪ್ರದಾಯಿಕ ಮನೋಭಾವ ಉಳ್ಳವರಿಗೆ ಒಂದು ವಿಚಿತ್ರವಾದ ವಿಚಾರವಾಗಿ ಹಾಗೂ ಕೆಟ್ಟ ಅಭಿರುಚಿಯಾಗಿ ತೋರಿತು. 11ನೆಯ ಶತಮಾನದಲ್ಲಿ ರಾಜಶೇಖರನು ಕೂಡ ಈ ಘಟನೆಯನ್ನು ಕುರಿತು ಹೀಗೆ ಹೇಳುತ್ತಾನೆ :

ದತ್ವಾರುದ್ಧಗತಿಂ ಖಸಾಧಿಪತಯೇ
ದೇವೀಂ ಧೃವ ಸ್ವಾಮಿನೀಮ್ !

ಯಸ್ಮಾತ್ ಖಂಡಿತ ಸಾಹಸೋ
ನಿವವೃತೇ ಶ್ರೀರಾಮಗುಪ್ತೋ ನರಃ

ಈ ಯಾರೋ ಹೇಳಿದರೆಂದು ಭಾವಿಸಿದ ಮಾತನ್ನು ನಾವು ಕಡೆಗಣಿಸುವಂತಿಲ್ಲ.

ಜಾಯಸವಾಲರು ವಿಶಾಖದತ್ತನನ್ನು ಚಂದ್ರಗುಪ್ತನ ಆಸ್ಥಾನ ಕವಿಯೆಂದೂ, 'ದೇವೀ ಚಂದ್ರಗುಪ್ತ' ನಾಟಕವು ಅವನ ಜೀವನವನ್ನು ಚಿತ್ರಿಸುವ ಕೃತಿಯೆಂದು ಪರಿಗಣಿಸಿದ್ದಾರೆ. ವಿಶಾಖದತ್ತನ ವಿಮರ್ಶಕರೆಲ್ಲರೂ ಆತನನ್ನು ಒಬ್ಬ ಪ್ರಾಮಾಣಿಕ ಐತಿಹಾಸಿಕ ನಾಟಕಕಾರನೆಂದು ಒಪ್ಪಿದ್ದಾರೆ. ರಾಖಾಲದಾಸ ಬ್ಯಾನರ್ಜಿ, ಪ್ರೊ|| ಅಲ್ತೇಕರ್ ಮತ್ತು ಜಾಯಸ್‌ವಾಲ್‌ರಂತಹ ವಿದ್ವಾಂಸರು ಪ್ರಾಮಾಣಿಕವಾದ ದಾಖಲೆಗಳನ್ನು ಪರಿಗಣಿಸಿ ಧ್ರುವಸ್ವಾಮಿನಿ ಮತ್ತು ಚಂದ್ರಗುಪ್ತರ ಪುನರ್ವಿವಾಹವನ್ನು ಐತಿಹಾಸಿಕ ಸತ್ಯವೆಂದು ಒಪ್ಪುತ್ತಾರೆ. ರಾಮಗುಪ್ತನ ಅಲ್ಪ ಕಾಲದ ಆಳ್ವಿಕೆಯು ಸೂಚನೆ ನೀಡುವ ನಾಣ್ಯ ಇತ್ತು ಎಂದು ಭಂಡಾರ್‌ಕರ್ ಅವರು ಅಭಿಪ್ರಾಯಪಡುತ್ತಾರೆ. ಬಾಣಭಟ್ಟನು ಕೂಡ ಚಂದ್ರಗುಪ್ತನು ಸ್ತ್ರೀ ವೇಷ ಧರಿಸಿ ಪರಸ್ತ್ರೀ ಕಾಮುಕನಾದ ಶಕ ರಾಜನನ್ನು ಕೊಂದು ಧ್ರುವಸ್ವಾಮಿನಿಯೊಡನೆ ಪುನರ್ವಿವಾಹ ಮಾಡಿಕೊಳ್ಳುವ ಘಟನೆಯನ್ನು ವರ್ಣಿಸುತ್ತಾನೆ. ಇವೇ ಮುಂತಾದ ಅಂಶಗಳನ್ನು ಪರೀಕ್ಷಿಸಿ ಅವು ಐತಿಹಾಸಿಕ ಸತ್ಯವೆಂದು ನಿಸ್ಸಂದೇಹವಾಗಿ ಹೇಳಬಹುದು.

ಇದಲ್ಲದೆ ಚಂದ್ರಗುಪ್ತನ ತಾಮ್ರಪತ್ರಗಳಲ್ಲಿ ಒಂದೆಡೆ 'ರೂಪಕೃತಿ' ಎಂಬ ಪದ ಸಿಗುತ್ತದೆ. ಇವನ್ನು ಕುರಿತಂತೆ ಪ್ರಾಚೀನ ಲೇಖಕರು ಚಂದ್ರಗುಪ್ತನು ಧ್ರುವಸ್ವಾಮಿನಿಯನ್ನು ರಕ್ಷಿಸುವುದಕ್ಕಾಗಿ ತನ್ನ ರೂಪವನ್ನು ಬದಲು ಮಾಡಿಕೊಂಡಿದ್ದನೆಂದೂ ಆಗಿಂದಾಗ್ಗೆ ಸಮರ್ಥನೆ ನೀಡಿದ್ದಾರೆ.

ಮಾತ್ರವಲ್ಲ, ಭಂಡಾರ್‌ಕರ್ ಅವರು ನಾರದ-ಪರಾಶರರ ಸ್ಮೃತಿಗಳನ್ನು ಆಧಾರವಾಗಿಟ್ಟುಕೊಂಡು ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಪುನರ್ಲಗ್ನ ವಾಡಿಕೆಯಲ್ಲಿತ್ತೆಂದು ವಾದಿಸಿದರು. ಶಾಸ್ತ್ರಗಳ ಪರ-ವಿರೋಧದ ಅಭಿಪ್ರಾಯಗಳು ದೊರಕುವುದು ನಿಜ. ಅಲ್ಲದೆ ವಿಧಿ-ನಿಷೇಧಗಳೆರಡಕ್ಕೂ ಸಾಕ್ಷಿ ದೊರಕುವುದರಿಂದ, ಇತಿಹಾಸದ ದೃಷ್ಟಿಯಿಂದ ಈ ಪದ್ಧತಿ ಆ ಕಾಲದಲ್ಲಿ ಇದ್ದಿರಲು ಸಾಧ್ಯ ಎಂದು ನಿರ್ಣಯಿಸಬಹುದು.

ಭಾರತೀಯ ದೃಷ್ಟಿಕೋನವನ್ನು ಕಾದಿಡುವ ವಿಶಾಖದತ್ತನಂತಹ ಪಂಡಿತರು ತಮ್ಮ ನಾಟಕದಲ್ಲಿ ಹೀಗೆ ಬರೆದಿದ್ದಾರೆ :

ರಮ್ಯಂಚಾರಿತ ಕಾರಿಣೀಚ ಕರುಣಾಶೋಕೇನ ನೀತಾದಶಾಮ್
ತತ್ಕಾಲೋಪಗತೇನ ರಾಹುಶಿರಸಾ ಗುಪ್ತನ ಚಾಂದ್ರಿಕಲಾ ।
ಪತ್ಯುಃ ಕ್ಲೀವಜನೋಚಿತೇನ ಚರಿತೇನಾನೇವ ಪುಂಸಃ ಸತೋ
ಲಜ್ಜಾ ಕೋಪವಿಷಾದ ಭೀತ್ಯರತಿಭಿಃ ಕ್ಷೇತ್ರಿಕೃತಾ ತಾಮ್ಯತೇ ||

ಹೀಗಾಗಿ ಆ ನಾಟಕದ ಸಂಪೂರ್ಣ ರೂಪ ನಮ್ಮ ಮುಂದಿರದಿದ್ದರೂ, ಇರುವ ಭಾಗದಿಂದ ಅದರ ಪರಿಣಾಮದ ನಿಶ್ಚಿತ ರೂಪ ಸಿಗುವುದರಿಂದ ಆ ಕಾಲದ ಸಾಮಾಜಿಕ ವ್ಯವಸ್ಥೆಯ ಆ ಭಾಗದ ಸ್ಪಷ್ಟೀಕರಣ ಖಂಡಿತ ಸಿಗುತ್ತದೆ.

ನಾರದ ಪರಾಶರರ ದ್ವಿಪದಿಗಳು ಹೀಗಿವೆ—

ಅಪತ್ಯಾರ್ಥಮ್ ಸ್ತ್ರಿಯಃ ಸೃಷ್ಟಾಃ ಸ್ತ್ರೀಕ್ಷೇತ್ರಂ ವೀಜಿನೋ ನರಾಃ
ಕ್ಷೇತ್ರಂ ಬೀಜವತೇ ದೇಯಂ ನಾ ಬೀಜೀ ಕ್ಷೇತ್ರಮರ್ಹತಿ ।
(—ನಾರದ)

ನಷ್ಟೇ ಮೃತೇ ಪ್ರವರ್ಜಿತೇ ಕ್ಲೀವೇ ಚ ಪತಿತೇ ಪತ್ಯೆ ।
ಪಂಚಾಸ್ವಾಪತ್ಸು ನಾರೀಗಾಂ ಪತಿರನ್ಯೋ ವಿಧೀಯತೇ ॥
(—ಪರಾಶರ)

ಈ ಸೂತ್ರಗಳ ಹಿನ್ನೆಲೆಯಲ್ಲಿ 'ದೇವೀ ಚಂದ್ರಗುಪ್ತ' ನಾಟಕವನ್ನು ಅರ್ಥೈಸಿದರೆ ಘಟನೆ ಹೆಚ್ಚು ಸ್ಫುಟವಾಗಿ ಕಂಡುಬರುತ್ತದೆ. ರಮ್ಯಾ ನಿಜ ಆದರೆ ಅರತಿಕಾರಿಣೀ ಅದು ಎಂದಾಗ ಯಾವುದರಲ್ಲಿ ಆ ಶ್ಲೇಷವಿದೆಯೋ ಅಲ್ಲಿ ಶಾಸ್ತ್ರ-ವ್ಯವಸ್ಥೆಯಿಂದ ಉದ್ಭವ ಗೊಂಡ ಧ್ವನಿ ಇದೆ. ಅಲ್ಲದೆ ಷಂಡತನದ ಪತಿ ಮತ್ತು ಬೀಜಧಾರಣ-ಯೋಗ್ಯಳು (ಕ್ಲೀವ ; ಕ್ಷೇತ್ರೀ-ಕೃತಾ) ಎಂಬ ಪಾರಿಭಾಷಿಕ ಪದಗಳನ್ನು ನಾಟಕಕಾರ ಒಂದಿಷ್ಟು ಆಲೋಚಿಸಿಯೇ ಬರೆದಿರಬೇಕು.

ಭಂಡಾರಕರ್ ಮತ್ತು ಜಾಯಸ್‌ವಾಲ್ ಇವರಿಬ್ಬರೂ ತಮ್ಮ ಲೇಖನಗಳಲ್ಲಿ ವಿಧವಾ ಮರು ವಿವಾಹ ವ್ಯವಸ್ಥೆಯನ್ನು ಅಂಗೀಕರಿಸಿ ಧೃವದೇವಿಯ ಮರು ವಿವಾಹವನ್ನು ಒಪ್ಪಿದ್ದಾರೆ. ಆದರೆ ಮೇಲೆ ಉಲ್ಲೇಖಿಸಿರುವ ಸ್ಮೃತಿಯ ಆಧಾರದಿಂದಲೇ ಹೇಳುವುದಾದರೆ ಬೇರೊಬ್ಬ ಪತಿಯನ್ನು ವಿವಾಹವಾಗಲು ಹೆಂಗಸಿಗೆ ಐದು ಕಷ್ಟ ಸ್ಥಿತಿಯನ್ನು ಉಲ್ಲೇಖಿಸಿದ್ದು, ಅವುಗಳಲ್ಲಿ ಪತಿಯ ನಿಧನದಿಂದಾಗಿ ಅವಳು ವಿಧವೆಯಾದಾಗ ಮಾತ್ರ ಮರು ವಿವಾಹಕ್ಕೆ ಒಂದು ಸಾಧ್ಯತೆ. ಆದರೆ ಉಳಿದ ನಾಲ್ಕು ಸ್ಥಿತಿಗಳು ಪತಿಯು ಇನ್ನೂ ಜೀವಂತವಿರುವಾಗಲೇ ಮರುವಿವಾಹದ ಸಾಧ್ಯತೆಯನ್ನು ತಿಳಿಸುತ್ತವೆ.

ಅತ್ತ ಜಾಯಸ್‌ವಾಲ್‌ರು ಚಂದ್ರಗುಪ್ತನಿಂದ ರಾಮಗುಪ್ತನ ವಧೆಯಾಯಿ ತೆಂಬ ಮಾತನ್ನೂ ಒಪ್ಪಲು ಸಿದ್ಧರಿಲ್ಲ. ಹೀಗಾಗಿ 'ದೇವೀ ಚಂದ್ರಗುಪ್ತ' ನಾಟಕದ ಉಪಸಂಹಾರ ಹೇಗಾದೀತು ? ವೈವಾಹಿಕ ವಿಚಾರಗಳ ಉಲ್ಲೇಖ ಸ್ಮೃತಿಗಳನ್ನು ಬಿಟ್ಟು ಬೇರೆಲ್ಲೂ ಇರುವುದಿಲ್ಲವೇ ? ಸ್ಮೃತಿಗಳು ಈ ಯುಗಕ್ಕೇ ಸಂಬಂಧಪಟ್ಟಿಲ್ಲ ವೆಂದೂ, ಅವು ಬೇರೊಂದು ಯುಗಕ್ಕೆ ಅನ್ವಯವಾಗುವುದೆಂದೂ ಹೇಳಬಹುದು. ಆದರೆ ಇದೇ ಈ ಕಲಿಯುಗದ ವಿಧಾನ ಗ್ರಂಥ 'ಅರ್ಥಶಾಸ್ತ್ರ' ಆಚಾರ್ಯ ಕೌಟಿಲ್ಯ ರಿಂದ ವಿರಚಿತಗೊಂಡಿದ್ದು, ನನಗೆ ಇದರಲ್ಲಿಯೇ ಸ್ಮೃತಿಯನ್ನು ಪುಷ್ಟೀಕರಿಸುವ ಮಾತು ಗಳು ಲಭಿಸಿದವು.

ಯಾವ ಸಂದರ್ಭದಲ್ಲಿ ಒಬ್ಬ ವಿವಾಹಿತ ಪುರುಷ ಬೇರೊಬ್ಬ ಸ್ತ್ರೀಯನ್ನು ಪರಿಗ್ರಹಿಸಬಹುದು ಎಂಬ ಅಂಶವನ್ನು ವಿಶ್ಲೇಷಿಸುತ್ತಾ 'ಧರ್ಮಸ್ಥೀಯಂ' ಪ್ರಕರಣದ ವಿವಾಹ-ಸಂಯುಕ್ತಾ ಎಂಬೆಡೆ ಆಚಾರ್ಯ ಕೌಟಿಲ್ಯರು ಹೀಗೆನ್ನುತ್ತಾರೆ—

ವರ್ಷಾಣ್ಯಷ್ಟಾ ವಪ್ರಜಾಯಮ ಮಾನಾಮ ಪುತ್ರಾವ್
ವಂಧ್ಯಾಂ ಚಾಕಾಂಕ್ಷೇತ್ ದಶವಿಂದು, ದ್ವಾದಶ
ಕನ್ಯಾ ಪ್ರಸವಿನೀಮ್ । ತತಃ ಪುತ್ರಾರ್ಥೀ ದ್ವಿತೀಯಾಂ ವಿಂದೇತ್ !

ಎಂಟು ವರ್ಷದ ವರೆಗೆ ಋತುಮತಿಯಾಗದೆ, ಹತ್ತು ವರ್ಷಗಳಲ್ಲಿ ಬೀಜಧಾರಣ ಯೋಗ್ಯಳಾಗದೆ, 12 ವರ್ಷಗಳಲ್ಲಿಯೂ ಗರ್ಭಧರಿಸದಿದ್ದಲ್ಲಿ ಆ ರೀತಿ ಪ್ರತೀಕ್ಷೆ ಮಾಡಿದ ಪುರುಷ ಪುತ್ರಾರ್ಥಿಯಾಗಿ ಎರಡನೆಯ ಹೆಂಗಸನ್ನು ಪರಿಗ್ರಹಿಸಬಹುದು. ಇದು ಪುರುಷರ ಅಧಿಕಾರ ಎಂಬುದನ್ನು ವಿವರಿಸುತ್ತಿದ್ದಂತೆ ಸ್ತ್ರೀಯರ ಅಧಿಕಾರವನ್ನೂ ಅದೇ ಅಧ್ಯಾಯದ ಕೊನೆಯಲ್ಲಿ ಘೋಷಿಸುತ್ತಾರೆ-ಹೀಗೆ :

ನೀಚತ್ವಮ್ ಪರದೇಶಮ್ ವಾ ಪ್ರಸ್ಥಿತೋ ರಾಜಃ ಲ್ವಿಷೀ ।
ಪ್ರಾಣಾಭಿಹಂತಾ ಪತಿತಸ್ತ್ಯಾಜ್ಯಃ ಕ್ಲೀವೋಽಪವಾಪತಿಃ ॥

ಈ ಅಭಿಪ್ರಾಯ ಪರಾಶರ ನಾರದರ ಹೇಳಿಕೆಯನ್ನು ಪ್ರತಿಫಲಿಸುತ್ತದೆ. ಇದೇ ಪರಿಸ್ಥಿತಿಗಳಲ್ಲಿ ಪತಿ-ತ್ಯಾಗ ಮಾಡುವ ಅಧಿಕಾರ ಸ್ತ್ರೀಯರದಾಗಿತ್ತು. ಏಕೆಂದರೆ 'ಅರ್ಥಶಾಸ್ತ್ರ'ದಲ್ಲಿಯೇ ಮುಂದೆ ಯಾವ ವಿಚ್ಛೇದದ (Divorce) ಪ್ರಕರಣ ಬರುತ್ತದೋ, ಅಲ್ಲಿ ಜಹುಶಃ ನ್ಯಾಯಾಲಯಗಳು 'ಅಮೋಕ್ಷಾ ಭರ್ತರಾ ಕಾಮಸ್ಯ ದ್ವಿಶತಿ ಭಾರ್ಯಾ ಭಾರ್ಯಾಯಾಶ್ಚ ಭರ್ತಾಃ ಪರಸ್ಪರಂ ದ್ವೇಷಾನಯೋಕ್ಷಃ ।' ಆಧಾರದ ಮೇಲೆ ತೀರ್ಪುಗಳನ್ನು ನೀಡುತ್ತಿದ್ದವು. ಮಿಕ್ಕ ನಾಲ್ಕು ರೀತಿಯ ವಿವಾಹಗಳಲ್ಲಿ ಸಾಮಾನ್ಯ ದ್ವೇಷವಷ್ಟೇ ವಿಚ್ಛೇದಕ್ಕೆ ಕಾರಣವಾಗಬಹುದಾದರೂ, ಧರ್ಮ-ವಿವಾಹದಲ್ಲಿ ಕೇವಲ ಇದೇ ಇಂತಹುದೇ ಸಂದರ್ಭಗಳಲ್ಲಿ ಪತಿ-ತ್ಯಾಜ್ಯ ಎಂದು ಅರ್ಥಮಾಡಿಕೊಳ್ಳಲಾಗುತ್ತಿತ್ತು. ಹಾಗಿಲ್ಲದಿದ್ದಲ್ಲಿ 'ಅಮೋಕ್ಷೋಽಹಿ ಧರ್ಮ-ವಿವಾಹಾನಾಮ್' ಎಂಬ ಸೂತ್ರದ ಅನುಸಾರ ಧರ್ಮ-ವಿವಾಹಗಳಲ್ಲಿ ಮೋಕ್ಷ ಎಂದರೆ ವಿಚ್ಛೇದ ಸಾಧ್ಯವಾಗುತ್ತಿರಲಿಲ್ಲ. ಪತಿ ಇಲ್ಲದಿರುವಿಕೆ ಅಥವ ಪರದೇಶ-ಗಮನನಾಗಿ ಕಾಣಬಾರದ ಕಾರಣದಿಂದಲೇ ದಮಯಂತಿಯ ಮರು-ವಿವಾಹದ ಘೋಷಣೆ ಮಾಡಲ್ಪಟ್ಟಿತ್ತು.

ನಾಟಕಕಾರ ಬಳಸಿರುವ 'ಅರತಿಕಾರಿಣೀ' ಮತ್ತು 'ಷಂಡ' ಈ ಪದಗಳು ಘಟನೆಯ ತೀವ್ರತೆ ಕುರಿತಂತೆ ಯಾವ ಸೂಚನೆಯನ್ನು ನೀಡುತ್ತವೆ ಎಂಬ ಅಂಶ ಮನನಯೋಗ್ಯ. ಅಬುಲ್‌ಹಸನ್‌ನ ಕಥೆಗೆ ಆಧಾರ 'ದೇವೀ ಚಂದ್ರಗುಪ್ತ' ನಾಟಕ

ವಾಗಿರುವ ಸಾಧ್ಯತೆ ಬಹಳ. ಏಕೆಂದರೆ ಅಬುಲ್‌ಹಸನ್ ಬರೆಯುವ ಕಾಲಕ್ಕೆ ಮುಂಚೆಯೇ ಈ ನಾಟಕ ಲಭ್ಯವಿತ್ತೆಂದು ಗುರುತಿಸಲಾಗಿದೆ.

ನಿಜ. ನಮ್ಮ ಆಚರಣೆ ಮತ್ತು ಧರ್ಮಶಾಸ್ತ್ರ ಪರಂಪರೆ ಒಂದು ರೀತಿ ವಿಚ್ಛಿನ್ನವಾಗಿಯೇ ಇದೆ. ಮುಂದೆ ನಾವು ನೋಡುವ ಅನೇಕ ಸಂಧಾರಣೆಗಳನ್ನು ಅಥವಾ ಸಮಾಜಶಾಸ್ತ್ರದ ಪರೀಕ್ಷಾತ್ಮಕ ಪ್ರಯೋಗಗಳನ್ನು ನಾವು ಕಲ್ಪಿಸಲೂ ಸಾಧ್ಯವಾಗದ್ದು ಅಥವಾ ಆಧುನಿಕ ಎಂದು ಅತ್ಯಾತುರದಿಂದ ಅವುಗಳನ್ನು ಅಭಾರತೀಯ ಎಂದು ಹೆಸರಿಸಬಹುದು. ಆದರೆ ಪ್ರಾಚೀನ ಭಾರತ ತನ್ನ ದೀರ್ಘಕಾಲದ ಪರಂಪರೆಯ ಗತಿ ವಿಧಾನದಲ್ಲಿ ಪ್ರತಿಯೊಂದು ವಿಧಾನದ, ಆಚರಣೆಯ ಪರೀಕ್ಷಾತ್ಮಕ ಪ್ರಯೋಗ ಮಾಡಿದೆ ಎಂದೇ ನನ್ನ ವಿಶ್ವಾಸ. ತಾತ್ಕಾಲಿಕ ಕಲ್ಯಾಣಕಾರೀ ಪರಿವರ್ತನೆಗಳೂ ಆಗಿವೆ. ಆದರಿಂದಾಗಿಯೇ ಒಂದೂವರೆ ಸಾವಿರ ವರ್ಷಗಳ ಹಿಂದೆ ಹೀಗಾಗುವುದು ಅಸ್ವಾಭಾವಿಕ ಎನಿಸುವುದಿಲ್ಲ. ಏನಾಗಬೇಕಿತ್ತು, ಮತ್ತು ಅದು ಹೇಗೆ ಆಗಬೇಕು ಎನ್ನುವ ವಿಚಾರಗಳು ವ್ಯವಸ್ಥಾಪಾಲಕರಿಗೆ ಬಿಟ್ಟಿದ್ದು.

# ಸ್ತ್ರೀನಿಷ್ಠ ವಿಮರ್ಶೆ

ಸಿ. ಎನ್. ರಾಮಚಂದ್ರನ್

ಈ ಶತಕದ ಉತ್ತರಾರ್ಧದಲ್ಲಿ ಹೆಚ್ಚಾಗಿ ಅಮೆರಿಕಾ ಮತ್ತು ಫ್ರಾನ್ಸ್ ದೇಶಗಳಲ್ಲಿ ಬೆಳೆಯುತ್ತಿರುವ 'ಸ್ತ್ರೀ ಸ್ವಾತಂತ್ರ್ಯ ಚಳುವಳಿ'ಯ ಒಂದು ಮುಖ 'ಸ್ತ್ರೀ ನಿಷ್ಠ ವಿಮರ್ಶೆ' (Feminist Criticism). ಇಂತಹ ವಿಮರ್ಶೆ ಸಮಾಜ-ಕೇಂದ್ರಿತ ವಿಮರ್ಶೆಯ ಒಂದು ಮುಖ್ಯ ಕವಲಾಗಿದ್ದು ಮನೋವೈಜ್ಞಾನಿಕ ವಿಮರ್ಶೆ ಮತ್ತು ಮಾರ್ಕ್ಸ್‌ವಾದಿ ವಿಮರ್ಶೆ ಇವೆರಡಕ್ಕೂ ಸಮೀಪವಾಗಿದೆ.

ಸ್ತ್ರೀ ನಿಷ್ಠ ವಿಮರ್ಶೆಯ ಸೈದ್ಧಾಂತಿಕ ನೆಲೆಗಳನ್ನು ಗುರುತಿಸುವುದು ಕಷ್ಟ. ಏಕೆಂದರೆ ಮಾರ್ಕ್ಸ್‌ವಾದಿ ವಿಮರ್ಶೆಯಂತೆಯೇ ಇದು ನಾನಾ ರೂಪಗಳಲ್ಲಿ—ಕೆಲ ಸಂದರ್ಭಗಳಲ್ಲಿ ಪರಸ್ಪರ ವಿರೋಧೀ ರೂಪಗಳಲ್ಲಿ ಕೂಡಾ—ಬೆಳೆಯುತ್ತದೆ. ಎರಡನೆಯದಾಗಿ, ಸ್ತ್ರೀನಿಷ್ಠ ವಿಮರ್ಶೆಗೆ ಒಂದು ಸೈದ್ಧಾಂತಿಕ ನೆಲೆಯನ್ನು ಮಂಡಿಸುವ ಪ್ರಯತ್ನವನ್ನೇ ಕೆಲವು ವಿಮರ್ಶಕಿಯರು ವಿರೋಧಿಸುತ್ತಾರೆ. ಕಾರಣ ಅವರ ದೃಷ್ಟಿಯಲ್ಲಿ ಎಲ್ಲಾ ಸಿದ್ಧಾಂತಗಳ ಮತ್ತು ತತ್ವ ಪ್ರಣಾಲಿಗಳ ಹಿಂದಿರುವ ಮನೋಭಾವ 'ಪುರುಷತ್ವ' (male principle). ಅವರು ಸ್ತ್ರೀತ್ವವನ್ನು ಯಾವ ಒಂದು ಸಿದ್ಧಾಂತಕ್ಕೂ ಕಟ್ಟುಬೀಳದ, ವಿವಿಧ ಕ್ಷೇತ್ರಗಳಲ್ಲಿ ಸರಾಗವಾಗಿ ಹರಿಯುವ ಪ್ರಜ್ಞೆಯೆಂದು ಪರಿಗಣಿಸುತ್ತಾರೆ. ಆದರೂ ಸ್ಥೂಲವಾಗಿ ಈ ವಿಮರ್ಶಾ ಮಾರ್ಗದ ನೆಲೆಯನ್ನು ಸ್ತ್ರೀಚಳುವಳಿಯ ಮುಖ್ಯ ವಕ್ತಾರರಾದ ಸಿಮೋನ್ ದ ಬೋವಾ, ಜೂಲಿಯ ಕ್ರಿಸ್ಟೀವ ಮತ್ತು ಕೇಟ್ ಮಿಲೆಟ್ ಅವರ ಗ್ರಂಥದಲ್ಲಿ ಕಾಣಬಹುದು.

ಆಧುನಿಕ ಸ್ತ್ರೀಚಳುವಳಿಯ ಮೂಲಭೂತ ತತ್ವಗಳನ್ನು ಮೊತ್ತಮೊದಲಿಗೆ ಫ್ರೆಂಚ್ ಚಿಂತಕಿ ಮತ್ತು ಸಾರ್ತ್ರ್‌ನ ನಿಕಟವರ್ತಿ ಸಿಮೋನ್ ದ ಬೋವಾ (Simmone de Beauvoir) ರಚಿಸಿದ "ದ್ವಿತೀಯ ಲಿಂಗ" (The Second Sex 1949) ಗ್ರಂಥದಲ್ಲಿ ಕಾಣುತ್ತೇವೆ. ಬೋವಾ ಪ್ರಕಾರ ಪುರುಷ ತನ್ನನ್ನು ಮಾನವನೆಂದು ಗುರುತಿಸಿಕೊಳ್ಳುತ್ತಾನೆ ; ಸ್ತ್ರೀ ತನ್ನನ್ನು ಸ್ತ್ರೀಯೆಂದೇ ಗುರುತಿಸಿಕೊಳ್ಳುತ್ತಾಳೆ.

ಎಂದರೆ ಸ್ತ್ರೀ-ಪುರುಷರ ನಡುವೆ ಇಂತಹ ಮೂಲಭೂತ ವ್ಯತ್ಯಾಸವಿದೆ. ಇತಿಹಾಸದ ಪ್ರಾರಂಭಿಕ ಘಟ್ಟದಿಂದಲೂ ಪುರುಷರ ಮಧ್ಯೆ ಹಂಚಿಹೋಗಿರುವ ಸ್ತ್ರೀಗೆ ಪ್ರತ್ಯೇಕ ಚರಿತ್ರೆಯಿಲ್ಲ, ಪ್ರತ್ಯೇಕ ಸಂಘಟನೆಯಿಲ್ಲ, ಪ್ರತ್ಯೇಕ ಅಸ್ತಿತ್ವವೂ ಇಲ್ಲ. ಇತಿಹಾಸ ದುದ್ದಕ್ಕೂ ಅವಳು ಪುರುಷನ ನೆರಳಾಗಿ ಬದುಕುತ್ತಾ ಬಂದಿದ್ದಾಳೆ. ಇಂತಹ ಅಸ್ತಿತ್ವ ವನ್ನು ಶಾಸಕರು, ದಾರ್ಶನಿಕರು, ಲೇಖಕರು ಮತ್ತು ವಿಜ್ಞಾನಿಗಳು "ಸ್ತ್ರೀಯ ಪರಾಧೀನ ಸ್ಥಿತಿ ದೈವಮಾನ್ಯವಾಗಿದೆ ಮತ್ತು ಈ ಪ್ರಪಂಚದಲ್ಲಿ ಉಪಯುಕ್ತವಾಗಿದೆ" ಎಂದು ಸಮರ್ಥಿಸುತ್ತಾ ಬಂದಿದ್ದಾರೆ. ಸ್ತ್ರೀ ತನಗಿಂತ ಕೀಳೆಂದು ಸಂಪೂರ್ಣ ನಂಬಿರುವ ಪುರುಷ ಅವಳನ್ನು ಕೀಳಾಗಿಯೇ ಕಾಣಲು ಎಲ್ಲಾ ಕ್ಷೇತ್ರಗಳಲ್ಲಿಯೂ ಬಗೆ ಬಗೆಯ ಸಮರ್ಥನೆಯನ್ನು ಶೋಧಿಸಿದ್ದಾನೆ. ಇಂತಹ ಸಮರ್ಥನೆಯನ್ನು ಬೋವಾ ಮುಖ್ಯ ವಾಗಿ ಜೈವಿಕ ಶಾಸ್ತ್ರ, ಅನುಭವ, ಸಂವಹನ (discourse). ಸುಪ್ತಪ್ರಜ್ಞೆ, ಸಮಾಜೊ-ಆರ್ಥಿಕ ಸ್ಥಿತಿ—ಈ ಐದು ಕ್ಷೇತ್ರಗಳಲ್ಲಿ ಗುರುತಿಸುತ್ತಾಳೆ. (ಎಂದರೆ 'ಸ್ತ್ರೀ ಕೇವಲ ಸಂತಾನಕ್ರಿಯೆಗಾಗಿಯೇ ಇರುವ ಒಂದು ಗರ್ಭಕೋಶ'ವೆಂಬ ಜೈವಿಕವಾದ : ಸ್ತ್ರೀ ಮುಖ್ಯವಾಗಿ ಭಾವನಾಜೀವಿಯೆಂಬ ವಾದ, ಇತ್ಯಾದಿ) ಇವುಗಳಲ್ಲಿ ಬೋವಾ ಮತ್ತು ಇತರ ಸ್ತ್ರೀಚಳವಳಿಕಾರರು 'ಸಂವಹನ'ವನ್ನು ಅತ್ಯಂತ ಗಂಭೀರವಾಗಿ ಪರಿಗಣಿಸುತ್ತಾರೆ. ಡೇಲ್ ಸ್ಪೆಂಡರ್ ತನ್ನ "ಪುರುಷ ನಿರ್ಮಿತ ಭಾಷೆ" (Dale Spender, Man-made Language) ಗ್ರಂಥದಲ್ಲಿ ವಾದಿಸುವಂತೆ ಸ್ತ್ರೀಯ ಪರಾಧೀನತೆಗೆ ಮುಖ್ಯ ಕಾರಣ ಪುರುಷ-ನಿರ್ಮಿತ ಹಾಗೂ ಪುರುಷ-ಪ್ರಧಾನ ಭಾಷೆ. ಯಾವುದು 'ಸತ್ಯ' ವೆನ್ನುವ ಪ್ರಶ್ನೆಗೆ ಉತ್ತರ 'ಯಾರು ಸಂವಹನವನ್ನು ನಿಯಂತ್ರಿಸುತ್ತಾರೆ' ಎಂಬುದನ್ನವ ಲಂಬಿಸಿದೆ.

ಸ್ತ್ರೀಚಳವಳಿಯ ಒಂದು ಮುಖ್ಯ ಮೈಲಿಗಲ್ಲೆಂದರೆ 1970ರಲ್ಲಿ ಹೊರಬಂದ ಕೇಟ್ ಮಿಲೆಟ್ ಬರೆದ "ಲೈಂಗಿಕ ರಾಜಕೀಯ" (Kate Millet, Sexual Politics). ಸ್ತ್ರೀಯರ ಪಾರತಂತ್ರ್ಯಕ್ಕೆ ಕಾರಣ ಪಿತೃಪ್ರಧಾನ ವ್ಯವಸ್ಥೆ ಎಂದು ವಾದಿಸುತ್ತಾ 'ರಾಜಕೀಯ' ಶಬ್ದವನ್ನೇ ಮಿಲೆಟ್ ನೂತನ ರೀತಿಯಲ್ಲಿ ಅರ್ಥೈಸುತ್ತಾಳೆ. "ಅಧಿಕಾರವನ್ನವಲಂಬಿಸಿದ ಒಂದು ಸಮೂಹಕ್ಕೂ ಮತ್ತು ಈ ಸಮೂಹದ ಮೇಲೆ ಹತೋಟಿ ಪಡೆದಿರುವ ಇನ್ನೊಂದು ಸಮೂಹಕ್ಕೂ ಇರುವ ಸಂಬಂಧವನ್ನು ನಾವು ರಾಜಕೀಯವೆಂದು ಕರೆಯಬಹುದು." ಈ ದೃಷ್ಟಿಯಿಂದ ಸ್ತ್ರೀಯರು ಪುರುಷರ ಲೈಂಗಿಕ ರಾಜಕೀಯಕ್ಕೆ ಬಲಿಯಾಗಿ ಅನಾದಿಕಾಲದಿಂದಲೂ ತಮ್ಮದೆಂದು ನಿರ್ಧರಿ ಸಲ್ಪಟ್ಟ ಬದುಕಿನ 'ಸಿದ್ಧಪಡಿಯಚ್ಚು'ಗಳಲ್ಲೇ ನರಳುತ್ತಿದ್ದಾರೆ. ಮಾನವಿಕ ಶಾಸ್ತ್ರಗಳಲ್ಲಿ ಬಳಸಲ್ಪಡುವ 'ಲಿಂಗಭೇದ' ಮತ್ತು 'ಲಿಂಗ' (Sex ಮತ್ತು gender) ಇವುಗಳ ವ್ಯತ್ಯಾಸವನ್ನು ಒತ್ತಿ ಹೇಳುತ್ತಾ, 'ಲಿಂಗಭೇದ'ವು ಜೈವಿಕವಾಗಿ ನಿರ್ಧರಿಸಲ್ಪಟ್ಟಿದ್ದರೆ 'ಲಿಂಗಪ್ರಜ್ಞೆ'ಯನ್ನು ಶಿಕ್ಷಣ, ಸಂಸ್ಕೃತಿ, ಮತ-ಧರ್ಮಗಳು ನಿರ್ಧರಿಸುತ್ತವೆಯೆಂದು ಮಿಲೆಟ್ ತೀರ್ಮಾನಿಸುತ್ತಾಳೆ. ಸೀಮೋನ ದ ಬೋವಾ, ಕೇಟ್ ಮಿಲೆಟ್, ಜರ್ಮೇನ್

ಗ್ರಿಯರ್ ಇವರುಗಳ ದೃಷ್ಟಿಯಲ್ಲಿ ಸ್ತ್ರೀಯರು ಸಮಾಜದ ಅಲ್ಪಸಂಖ್ಯಾತರಂತೆ, ತಾವು ನಿಜವಾಗಿ ಅಲ್ಪಸಂಖ್ಯಾತರಲ್ಲದಿದ್ದರೂ, ರಾಜಕೀಯವಾಗಿ ಹಾಗೂ ಆರ್ಥಿಕವಾಗಿ ಶೋಷಣೆಗೊಳಗಾಗಿದ್ದಾರೆ; ಆದ್ದರಿಂದ ಇತರ ಅಲ್ಪಸಂಖ್ಯಾತರಂತೆ ಸ್ತ್ರೀಯರೂ ಸಾಂಘಿಕವಾಗಿ ತಮ್ಮ ಹಕ್ಕುಬಾಧ್ಯತೆಗಳಿಗಾಗಿ ಹೋರಾಡಲೇಬೇಕು.

ಹೀಗೆ ಮುಖ್ಯವಾಗಿ ರಾಜಕೀಯ-ಸಾಮಾಜಿಕ ನೆಲೆಯುಳ್ಳ ಸ್ತ್ರೀನಿಷ್ಠ ವಿಮರ್ಶೆಯ ನಾಲ್ಕು ಪ್ರಮುಖ ದಿಕ್ಕುಗಳನ್ನು ಶಾರನ್ ಸ್ಪೆನ್ಸರ್ (Sharon Spencer) **ಹೀಗೆ ಗುರುತಿಸುತ್ತಾಳೆ :**

1. ಇಂದು ಅಲಕ್ಷ್ಯವಾಗಿರುವ ಅಥವಾ ವಿನಾಕಾರಣ ನಿರ್ಲಕ್ಷಿಸಲ್ಪಟ್ಟಿರುವ ಸ್ತ್ರೀಯರಿಂದ ಬರೆಯಲ್ಪಟ್ಟ ಕೃತಿಗಳನ್ನು ಶೋಧಿಸಿ ಬೆಳಕಿಗೆ ತರುವುದು. (ಕನ್ನಡದಲ್ಲಿ ಟಿ.ನ. ಮಂಗಳಾ ಅವರು ತಿರುಮಲಾಂಬಾ ಅವರ ಕೃತಿಗಳನ್ನು, ಬೆಂಗಳೂರಿನ ಕನ್ನಡ ಲೇಖಕಿಯರ ಸಂಘದವರು ಬೆಳಗೆರೆ ಜಾನಕಮ್ಮ, ಶಾಮಲಾ ದೇವಿ ಬೆಳಗಾಂವಕರರ ಕೃತಿಗಳನ್ನು ಬೆಳಕಿಗೆ ತಂದಂತೆ.)
2. ಪ್ರಾಚೀನ ಹಾಗೂ ಅರ್ವಾಚೀನ ಸಾಹಿತ್ಯದಲ್ಲಿ ಮೂಡಿಬಂದಿರುವ ಸ್ತ್ರೀಯ ಚಿತ್ರಣದ ವಿಶ್ಲೇಷಣೆ ಮತ್ತು ವ್ಯಾಖ್ಯಾನ.
3. ಮಹಿಳಾ ಸಾಹಿತಿಗಳನ್ನು ಮತ್ತು ಅವರ ಕೃತಿಗಳನ್ನು ಕುರಿತು ಪುರುಷರಿಂದ ಬಂದಿರುವ ವಿಮರ್ಶೆ ಹಾಗೂ ಪ್ರತಿಕ್ರಿಯೆಗಳನ್ನು ವಿಶ್ಲೇಷಿಸುವುದು.
4. ಸ್ತ್ರೀಕೇಂದ್ರಿತ ವೈಚಾರಿಕ ನೆಲೆಯಲ್ಲಿ ಸೃಜನಾತ್ಮಕ ಮತ್ತು ವಿಮರ್ಶಾತ್ಮಕ ಕೃತಿಗಳನ್ನು ವಿಪುಲವಾಗಿ ರಚಿಸಿ 'ಸ್ತ್ರೀವಿಶಿಷ್ಟ ಪ್ರಜ್ಞೆ'ಗೆ (feminine consciousness) ಅಭಿವ್ಯಕ್ತಿ ಮತ್ತು ಪ್ರಸಾರ ಕೊಡುವುದು.
   (ನೋಡಿ : Sharon Spencer, 1982.)

ಮೇಲೆ ಹೇಳಿದ ನಾಲ್ಕೂ ದಿಕ್ಕುಗಳಲ್ಲಿ ಇಂದು ಪಾಶ್ಚಾತ್ಯ ಸಾಹಿತ್ಯ ಕ್ಷೇತ್ರಗಳಲ್ಲಿ ಅಪಾರ ಕಾರ್ಯವಾಗುತ್ತಿದೆ. ಪ್ರಾಚೀನ ಹಾಗೂ ಅರ್ವಾಚೀನ ಸಾಹಿತ್ಯದಲ್ಲಿ ಹೇಗೆ ಸ್ತ್ರೀಯರು 'ಅಕ್ಷತ ಕನ್ಯೆ ಅಥವಾ ವೇಶ್ಯೆ', 'ದೇವತೆ ಅಥವಾ ರಾಕ್ಷಸಿ', 'ಪತಿವ್ರತೆ ಅಥವಾ ಚಂಡಿ', 'ತಾಯಿ ಅಥವಾ ಮೋಹಿನಿ'—ಹೀಗೆ ಕೆಲವೇ ಕೆಲವು ಸೀಮಿತ ಪಡಿಯಚ್ಚುಗಳಲ್ಲಿ ಚಿತ್ರಿಸಲ್ಪಟ್ಟಿದ್ದಾರೆಂದು ಸಫಲವಾಗಿ ಮೇರಿ ಫರ್ಗುಸನ್ ಮುಂತಾದವರು ವಿಶ್ಲೇಷಿಸಿದ್ದಾರೆ. ಹಾಗೆಯೇ ಪುರುಷರಿಂದ ಮಾಡಲ್ಪಟ್ಟ ವಿಮರ್ಶೆ ಹೇಗೆ 'ಎಲ್ಲಾ ಉತ್ತಮ ಸಾಹಿತ್ಯವೂ ಪುರುಷರಚಿತ ಸಾಹಿತ್ಯದ ಮಾದರಿಯನ್ನೇ ಆದರ್ಶವಾಗಿ ಎತ್ತಿ ಹಿಡಿದು ಸ್ತ್ರೀ-ರಚಿತ ಸಾಹಿತ್ಯವನ್ನು ಕಡೆಗಣಿಸುತ್ತದೆ—ಎಂದು ಆಧಾರಪೂರ್ವಕವಾಗಿ ಆ್ಯನೆಟ್ ಕೋಲೋಡ್ನಿ (Annette Kolodny) ಮುಂತಾದವರು ಚರ್ಚಿಸಿದ್ದಾರೆ. ಇವರುಗಳ ದೃಷ್ಟಿಯಲ್ಲಿ ವಿಮರ್ಶೆ ನಿರಪೇಕ್ಷವಾಗಿ, ನಿಷ್ಪಕ್ಷಪಾತವಾಗಿ ಇರಲು ಸಾಧ್ಯವೇ ಇಲ್ಲ.

ಕೊನೆಯದಾಗಿ, ಸ್ತ್ರೀನಿಷ್ಠ ವಿಮರ್ಶೆ 'ಕೃತಿನಿಷ್ಠ'ವಾಗಿಯೂ ಮತ್ತು ಸಂದರ್ಭ ನಿಷ್ಠ'ವಾಗಿಯೂ ಇರಬೇಕೆಂದು ಆ್ಯನಿಸ್ ಪ್ರ್ಯಾಟ್ (Annis Pratt) ವಾದಿಸುತ್ತಾಳೆ. ಸಾಹಿತ್ಯಕವಾಗಿ ಒಂದು ಕೃತಿ ಯಶಸ್ವಿಯಾಗಿದೆಯೋ ಇಲ್ಲವೆ ಎಂದು ನೋಡಲು ಕೃತಿ ನಿಷ್ಠ ನವ್ಯವಿಮರ್ಶೆ ಮತ್ತು ಒಂದು ಕೃತಿ ಅಷ್ಟು ಸಫಲವಾಗಿರದಿದ್ದರೂ ಏಕೆ ಮತ್ತು ಯಾವ ಚಾರಿತ್ರಿಕ ಕಾರಣಗಳಿಂದ ಸಫಲವಾಗಿಲ್ಲವೆಂದು ತಿಳಿಯಲು ಈ ಕೃತಿಯ ಸಾಮಾಜಿಕ-ಸಾಂಸ್ಕೃತಿಕ ಸಂದರ್ಭದ ವಿಮರ್ಶೆ ಇವೆರಡೂ ಮುಖ್ಯವೆಂದು ಪ್ರ್ಯಾಟ್ ವಾದಿಸುತ್ತಾಳೆ.

ಇನ್ನೂ ಕೇವಲ ಮೂರು-ನಾಲ್ಕು ದಶಕಗಳ ಇತಿಹಾಸವಿರುವ 'ಸ್ತ್ರೀನಿಷ್ಠ' ವಿಮರ್ಶೆಯ ಇಂದಿನ ಸಂಧಿಕಾಲದಲ್ಲಿ ಸಹಜವಾಗಿಯೇ ಆಂತರಿಕ ವಿರೋಧಗಳು ಹಾಗೂ ಭಿನ್ನಾಭಿಪ್ರಾಯಗಳು ಕಂಡುಬರುತ್ತವೆ. ಮುಖ್ಯವಾಗಿ ಮಾರ್ಕ್ಸ್‌ವಾದಿ ಧೋರಣೆಯುಳ್ಳ ಮಿಶಲ್ ಬ್ಯಾರಟ್, ಜೂಲಿಯ ಕ್ರಿಸ್ಟೆವ ಮುಂತಾದವರು ಒಂದು ಪ್ರಮುಖ ಕವಲನ್ನು ಪ್ರತಿನಿಧಿಸಿದರೆ, ಜೇನ್ ಗ್ಯಾಲಪ್ ಮುಂತಾದವರು ಮತ್ತೊಂದು ವರ್ಗವನ್ನು ಪ್ರತಿನಿಧಿಸುತ್ತಾರೆ. ಸ್ತ್ರೀಕೇಂದ್ರಿತ ವಿಚಾರ ಪ್ರಣಾಲಿಯ ಮೂಲದಲ್ಲಿರುವ ಸಮಸ್ಯೆಯೆಂದರೆ : ಸ್ತ್ರೀಯು ಪುರುಷನಿಗಿಂತ ಯಾವ ರೀತಿಯಲ್ಲೂ ಭಿನ್ನಳಲ್ಲ ಎಂದು ನಂಬಿ ಪುರುಷರೊಡನೆ ಸಮಾನತೆಗೆ ಹೋರಾಡಬೇಕೇ; ಅಥವಾ ಪುರುಷನಿಗಿಂತ ಪ್ರಜ್ಞೆ ಯಲ್ಲಿ, ಪ್ರತಿಸ್ಪಂದನೆಯಲ್ಲಿ ಸ್ತ್ರೀ ಭಿನ್ನಳು ಮತ್ತು ಈ ಭಿನ್ನತೆಯೇ ಸ್ತ್ರೀಯ ವಿಶಿಷ್ಟ ಶಕ್ತಿ ಎಂದು ಮುಂದುವರಿಯಬೇಕೇ ಎಂಬುದು. ಮೊದಲಿನ ಪೀಳಿಗೆಯ ಕೇಟ್ ಮಿಲೆಟ್ ಮುಂತಾದವರು ಪುರುಷ-ಸಮಾನತೆಗೆ ಒತ್ತುಕೊಟ್ಟರೆ ಇತ್ತೀಚೆಗಿನ ಜೂಲಿಯ ಕ್ರಿಸ್ಟೆವ ಮುಂತಾದವರು ಸ್ತ್ರೀಯ ವಿಶಿಷ್ಟ ಭಿನ್ನತೆಯನ್ನು ಎತ್ತಿ ಹಿಡಿಯುತ್ತಾರೆ. ಪುರುಷಕಲ್ಪಿತ ನಿಯತಗಳು ಮತ್ತು ನಿಶ್ಚಿತಗಳು (fixities and definities) ಇವುಗಳನ್ನು ಮೀರಿ ಸ್ತ್ರೀ-ಸಂವಹನ (feminist discourse) ದ ನಾನಾ ಸಾಧ್ಯತೆ ಗಳನ್ನು ಹಾಗೂ ಯಾವುದೇ ರೀತಿಯ ಕಟ್ಟುಪಾಡಿಗೆ (ಸಾಹಿತ್ಯಕ ಹಾಗೂ ಸಾಂಸ್ಕೃತಿಕ) ಒಳಪಡದ ಮುಕ್ತ ಪ್ರಜ್ಞೆಯೇ ಸ್ತ್ರೀ-ಸಾಹಿತ್ಯದ ಸ್ವೋಪಜ್ಞ ಕೊಡುಗೆಯಾಗಬಲ್ಲು ದೆಂದು ಜೂಲಿಯ ಕ್ರಿಸ್ಟೆವ ಸಿದ್ಧಾಂತಿಸುತ್ತಾಳೆ. ಈಗಲ್‌ಟನ್ ಹೇಳುವಂತೆ, ಸ್ತ್ರೀ ಚಳವಳಿ ಹಾಗೂ ಸ್ತ್ರೀನಿಷ್ಠ ವಿಮರ್ಶೆ ಇಲ್ಲಿಯವರೆಗೆ ಕಂಡುಬರದಿದ್ದಂತಹ ರಾಜಕೀಯ-ಸಾಂಸ್ಕೃತಿಕ ಏಕತೆಯನ್ನು ಸಫಲವಾಗಿ ಬೆಳೆಸಿದೆ, ಮತ್ತು ಮಾರ್ಕ್ಸ್‌ವಾದಿ ವಿಮರ್ಶೆ ಯಂತೆಯೇ ಸ್ತ್ರೀನಿಷ್ಠ ವಿಮರ್ಶೆಯೂ ನಮ್ಮ ಸಾಹಿತ್ಯಕ ಪ್ರಜ್ಞೆಯ ಪರಿಧಿಯನ್ನು ಅಪಾರವಾಗಿ ವಿಸ್ತರಿಸಿದೆ.*

---

* ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ, ಸಾಹಿತ್ಯ ಪಾರಿಭಾಷಿಕ ಮಾಲೆಯ 'ಸಾಹಿತ್ಯ ವಿಮರ್ಶೆ' ಪುಸ್ತಕದಿಂದ.



# ವಿಷ್ಣು ವಾಮನ ಶಿರವಾಡಕರ

**ಜಿ. ಎಸ್. ಭಟ್ಟ**

ಭಾರತೀಯ ಜ್ಞಾನಪೀಠ ಪ್ರಶಸ್ತಿ ಪಡೆದಿರುವ ವಿಷ್ಣು ವಾಮನ ಶಿರವಾಡಕರ ಮರಾಠಿಯ ಪ್ರಸಿದ್ಧ ಕವಿ, ನಾಟಕಕಾರ, ಕಥೆಗಾರ, ಗದ್ಯ ಲೇಖಕ. ಮರಾಠಿ ಸಾರಸ್ವತ ಲೋಕದಲ್ಲಿ 'ಕುಸುಮಾಗ್ರಜ' ಎಂಬ ಕಾವ್ಯನಾಮದಿಂದಲೇ ಅವರು ಪ್ರಸಿದ್ಧರಾಗಿದ್ದಾರೆ.

1912 ಫೆಬ್ರುವರಿ 27ರಂದು ಶಿರವಾಡಕರ ಪುಣೆಯಲ್ಲಿ ಜನಿಸಿದರು. ಅವರ ಬಾಲ್ಯ ಮತ್ತು ಶಿಕ್ಷಣ ನಡೆದದ್ದು ನಾಸಿಕ ಮತ್ತು ಅದರ ಸುತ್ತಮುತ್ತಲಿನಲ್ಲಿ. ಅವರ ಮೊದಲ ಕವನ ಸಂಕಲನ 'ಜೀವನ ಲಹರಿ' (1933). 'ನವಾಮನು' ಎಂಬ ಪತ್ರಿಕೆಯಲ್ಲಿ ಅವರು ಲೇಖನ ಬರೆಯಲು ಪ್ರಾರಂಭಿಸಿದ್ದು ಇದೇ ವರ್ಷದಿಂದ.

ಶಿರವಾಡಕರ ಅವರಿಗೆ ಮರಾಠಿ ಸಾಹಿತ್ಯದಲ್ಲಿ ಶಾಶ್ವತಸ್ಥಾನ ದೊರೆತದ್ದು ಅವರ 'ವಿಶಾಖಾ' (1942) ಕವನ ಸಂಕಲನದಿಂದ. ಸಾಮ್ರಾಜ್ಯಶಾಹಿಯ ವಿರುದ್ಧ ಅವರು ಬರೆದ ಸೊಗಸಾದ ಭಾವಗೀತೆಗಳು ಅವರಿಗೆ ಪ್ರಸಿದ್ಧಿ ತಂದುಕೊಟ್ಟವು. ಅನ್ಯಾಯದ ವಿರುದ್ಧ ಹೋರಾಟ ಅವರ ಕವನಗಳಲ್ಲಿ ಎದ್ದು ಕಾಣುವ ಅಂಶ. 'ಅನುಭವದ ಹಲವು ಮಗ್ಗಲುಗಳನ್ನು ಅವರ ಕವನಗಳಲ್ಲಿ ಕಾಣಬಹುದು' ಎಂಬುದು ಹಲವು ಪ್ರಸಿದ್ಧ ವಿಮರ್ಶಕರ ಅಭಿಪ್ರಾಯ. ಕುಸುಮಾವತಿ ದೇಶಪಾಂಡೆ ಅವರು 'ಶಿರವಾಡಕರ ಅವರ

ಭಾವಗೀತೆಗಳು ಅತ್ಯಂತ ಸೂಕ್ಷ್ಮವಾದ ಕುಸುರಿ ಕೆಲಸಗಳು, ಮರಾಠಿ ಕವಿತೆಯಲ್ಲಿ ಅವರು ಉನ್ನತ ಜಲರೇಖೆಗಳನ್ನು ರಚಿಸಿದ್ದಾರೆ' ಎಂದಿದ್ದಾರೆ.

'ಜೀವನ ಲಹರಿ'ಯಿಂದ 'ಮುಕ್ತಾಯು'ದ ವರೆಗೆ ಅವರು ರಚಿಸಿದ ಕವನ ಸಂಕಲನಗಳು ಹದಿಮೂರು. ಆದರೆ, ಅವರ ಕವನ ಸಂಗ್ರಹಗಳಲ್ಲೆಲ್ಲ ಉತ್ತಮವಾದ ಪ್ರೇಮ ಪರಿಗಣಿತವಾದ್ದು 'ವಿಶಾಖಾ'. ಕೇವಲ ರಾಷ್ಟ್ರಪ್ರೇಮದ ಗೀತೆಗಳನ್ನಷ್ಟೇ ರಚಿಸಿ ಅದರಲ್ಲಿ ತೃಪ್ತಿಕಾಣದ ಕವಿ, ಮಾನವನ ಅಂತರಂಗದ ಸೂಕ್ಷ್ಮ ಭಾವಗಳನ್ನು ಸುಂದರವಾಗಿ ಚಿತ್ರಿಸಿ ಅನೇಕ ಭಾವಗೀತೆಗಳನ್ನು ರಚಿಸಿದ್ದಾರೆ.

ತಮ್ಮ ಕವನ ಸಂಕಲನಗಳಿಂದಲೇ ಮರಾಠಿ ಸಾಹಿತ್ಯದಲ್ಲಿ ಶಾಶ್ವತ ಸ್ಥಾನ ಗಳಿಸಿದ್ದ ಶಿರವಾಡಕರ್ ಸಾಹಿತ್ಯದ ಇತರ ಪ್ರಕಾರಗಳಲ್ಲಿ ತಮ್ಮ ಪ್ರತಿಭೆಯನ್ನು ಮೆರೆದರು. ಆ ಮೂಲಕ ಮರಾಠಿ ಸಾಹಿತ್ಯದ ಸಿರಿವಂತಿಕೆ ಹೆಚ್ಚಿಸಿದರು, ಮರಾಠಿಯಲ್ಲಿ ಹತ್ತು ನಾಟಕ, ಆರು ಕಥಾಸಂಕಲನ ಮತ್ತು ಮೂರು ಕಾದಂಬರಿಗಳನ್ನು ರಚಿಸಿದ ಅವರು ಒಬ್ಬ ಹೆಸರಾಂತ ಲೇಖಕ. ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಕೆಲಸ ಮಾಡಿದರೂ ಅವರಿಗೆ ಅತ್ಯಂತ ಪ್ರೀತಿಯ ವಿಷಯಗಳು ಕಾವ್ಯ ಹಾಗೂ ನಾಟಕ.

ಮರಾಠಿಯ ಪ್ರಸಿದ್ಧ ನಾಟಕಕಾರ ದಿ. ರಾಮಗಣೇಶ ಗಡಕರಿ ಮತ್ತು ಷೇಕ್ಸ್ಪಿಯರ್‌ನ ಕೃತಿಗಳು ಶಿರವಾಡಕರ ಅವರ ಮೇಲೆ ಗಾಢ ಪ್ರಭಾವ ಬೀರಿದುವು. ಅವರ ನಾಟಕಗಳಲ್ಲಿ ಮುಖ್ಯವಾದವು : ನಟ ಸಾಮ್ರಾಟ್, ಕೌಂತೇಯ, ದೂಸ್ರಾ ಪೇಷವಾ, ವೈಜಯಂತಿ, ರಾಜಮುಕುಟ, ವೀಜ ಮ್ಹಣಾಲೀ ಧರತೀಲಾ.

'ನಟ ಸಾಮ್ರಾಟ್' ಅವರ ನಾಟಕಗಳ ಪೈಕಿ ಅತ್ಯಂತ ಶ್ರೇಷ್ಠವಾದುದು. ಇದರಲ್ಲಿ ಪಾತ್ರವಹಿಸುವ ನಟರು ಅದನ್ನು ಒಂದು ಆಹ್ವಾನವೆಂದು ಸ್ವೀಕರಿಸಿ ನಟಿಸಬೇಕಾಗು ತ್ತದೆ. ಅಪ್ಪಾ ಸಾಹೇಬ ಬೆಲ್ವಲ್ಕರನ ಪಾತ್ರವನ್ನು ಅವರು ಸೊಗಸಾಗಿ ಚಿತ್ರಿಸಿದ್ದಾರೆ. ಮರಾಠಿ ರಂಗಭೂಮಿಯ ಹೆಸರಾಂತ ನಟರ ಜೀವನವನ್ನು ಗಮನ ದಲ್ಲಿರಿಸಿಕೊಂಡೇ ಅವರು ಈ ಪಾತ್ರ ಸೃಷ್ಟಿಸಿದ್ದಾರೆ. ಡಾ॥ ಶ್ರೀರಾಮ್‌ಲಾಗೂ ಮತ್ತು ಯಶವಂತ ದತ್ತಾ ಮೊದಲಾದ ರಂಗನಟರಿಗೆ ಈ ಪಾತ್ರ ಪ್ರಸಿದ್ಧಿ ತಂದುಕೊಟ್ಟಿತು. ನಾಟಕದ ಭಾಷೆ ಕಾವ್ಯಾತ್ಮಕವಾಗಿದೆ. ನಟಸಾಮ್ರಾಟ ಅನೇಕ ಭಾರತೀಯ ಭಾಷೆಗಳಿಗೆ ಭಾಷಾಂತರಗೊಂಡಿದ್ದು, ಮಹಾರಾಷ್ಟ್ರದಾದ್ಯಂತ ಈ ನಾಟಕದ ಸಾವಿರಾರು ಪ್ರಯೋಗ ಗಳಾಗಿರುವುದೂ ಅದರ ಜನಪ್ರಿಯತೆಗೆ ಸಾಕ್ಷಿ. "ಮರಾಠಿ ಸಾಹಿತ್ಯಕ್ಕೂ ರಂಗ ಭೂಮಿಗೂ 'ನಟ ಸಾಮ್ರಾಟ್' ವಿಶೇಷ ಸ್ಪರ್ಶ ನೀಡಿದೆ" ಎಂಬುದು ಮಾಧವ ಮನೋಹರ ಅವರ ಅಭಿಪ್ರಾಯ. ಈ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ (1974).

ಅವರ ಇನ್ನೊಂದು ನಾಟಕ 'ವೀಜ್ ಮ್ಹಣಾಲೀ ಧರ್‌ತೀಲಾ' ಕೂಡ ಕಾವ್ಯಾತ್ಮಕ ವಾಗಿದೆ. ರಾಣಿ ಲಕ್ಷ್ಮೀಬಾಯಿಯ ನೆನಪು ಸದಾ ಹಸಿರಾಗಿರುವಂತೆ ಅವರು ಆ ಪಾತ್ರವನ್ನು ಸೃಷ್ಟಿಸಿದ್ದಾರೆ. ಹೆಲನ್ ಕೆಲ್ಲರ್‌ಳ ಜೀವನವನ್ನು ಆಧರಿಸಿ 'ಕಿಮಯಾಗಾರ್'

ಎಂಬ ನಾಟಕ ರಚಿಸಿದ್ದಾರೆ. 'ದೂಸ್ರಾ ಪೇಷವಾ' ಒಂದು ಜನಪ್ರಿಯ ನಾಟಕ. ಅವರ ನಾಟಕಗಳು ರಂಗಭೂಮಿಯ ಮೇಲೆ ಹೇಗೆ ಯಶಸ್ವೀ ಪ್ರಯೋಗಗಳೆನಿಸಿದವೋ ಹಾಗೆ ಭಾಷಾದೃಷ್ಟಿಯಿಂದ ವಾಚನೀಯವಾಗಿಯೂ, ಆಸ್ವಾದನೀಯವಾಗಿಯೂ ಇವೆ.

'ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯಲ್ಲಿ ವಿಕಾಸ ಹೊಂದಿದ ಶಿರವಾಡಕರ ಅವರ ಗದ್ಯ ಕೃತಿಗಳಲ್ಲಿ–ಮುಖ್ಯವಾಗಿ ಕಾದಂಬರಿಗಳಲ್ಲಿ–ಹಳತು ಹೊಸತರ ಅಸಹನೀಯ ಸಮ್ಮಿಶ್ರಣವಿದೆ–ಹೊಸ ಸಾಮಾಜಿಕ ಸಂದರ್ಭದಲ್ಲಿ ಹಳೆಯ ರಮ್ಯ ಜಗತ್ತಿನ ತುಡಿತವಿದೆ' ಎಂಬುದು ಎಂ. ವಿ. ರಾಜಾಧ್ಯಕ್ಷರ ಅಭಿಪ್ರಾಯ.

ಶಿರವಾಡಕರ ಅವರಿಗೆ ಮಹಾರಾಷ್ಟ್ರ ರಾಜ್ಯ ಪ್ರಶಸ್ತಿಯೂ ಸೇರಿದಂತೆ ಅನೇಕ ಉನ್ನತ ಪ್ರಶಸ್ತಿ ಮತ್ತು ಸನ್ಮಾನಗಳು ಲಭ್ಯವಾಗಿವೆ. 1974ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದರು. ಗೋವಾದಲ್ಲಿ 1964ರಲ್ಲಿ ಜರುಗಿದ ಮರಾಠಿ ಸಾಹಿತ್ಯ ಸಮ್ಮೇಳನಕ್ಕೆ ಅವರು ಅಧ್ಯಕ್ಷರಾಗಿದ್ದರು. 1970ರಲ್ಲಿ ಜರುಗಿದ ಮಹಾರಾಷ್ಟ್ರ ನಾಟ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸುವ ಗೌರವವೂ ಅವರಿಗೆ ಪ್ರಾಪ್ತವಾಯಿತು. ಕಳೆದ ಐದು ದಶಕಗಳಿಂದ ಮರಾಠಿ ಭಾಷೆ ಸಾಹಿತ್ಯಗಳಿಗೆ ಸೇವೆ ಸಲ್ಲಿಸುತ್ತಾ ಬಂದಿರುವ ಶಿರವಾಡಕರರು ಅತ್ಯಂತ ಪ್ರತಿಭಾವಂತರು.

# ಪ್ರೇಮಗೈವುದಾರ ಮೇಲೆ ?

ಮೂಲ : 'ಕುಸುಮಾಗ್ರಜ'
ಅನು : ಬಿ. ಎ. ಸನದಿ

ಪ್ರೇಮಗೈವುದಾರ ಮೇಲೆ ?
ಯಾರ ಮೇಲೆಯೂ ಪ್ರೇಮಗೈಯಬಹುದು :
ರಾಧೆಯ ವತ್ಸಲ ಸ್ತನಗಳ ಮೇಲೆ
ಭೀಷ್ಮ-ದ್ರೋಣರಂಥವರ ದಣಿ-
ದಣಿದ ತೀರ್ಥರೂಪ ಚರಣಗಳ ಮೇಲೆ
ದುರ್ಯೋಧನ-ಕರ್ಣರ ಅಪರಾಜಿತ ಮರಣದ ಮೇಲೆ
ಯಾರ ಮೇಲೆಯೂ ಪ್ರೇಮಗೈಯಬಹುದು.

........

ಪ್ರೇಮ
ರುಕ್ಮಿಣಿಯ ಚೆಂದುಟಿಗಳ ಮೇಲೆ
ವಕ್ರತುಂಡನ ಹಾಸ್ಯಾಸ್ಪದ ಹೊಟ್ಟೆಯ ಮೇಲೆ
ಹಸುವಿನ ಕಣ್ಣಿಂದೊಸರುವ ನೀರವ
ಕರುಣಾರಸಧಾರೆಯ ಮೇಲೆ
ನವಿಲುಗರಿಯ ನವಿರು
ನವಿರಾದ ರಂಗಸಂಗಮದ ಮೇಲೆ
ಕರುಳ ಬಳ್ಳಿಯ ಮೇಲೆ
ಝಳಪಿಸುವ ಖಡ್ಗಧಾರೆಯ ಮೇಲೆ
ಯಾರ ಮೇಲೆಯೂ ಪ್ರೇಮಗೈಯಬಹುದು,

........

ಪ್ರೇಮ
ಸುದಾಮನಂಥ ಬಡ ಬ್ರಾಹ್ಮಣನ ಮೇಲೆ
ಅರ್ಜುನನಂಥ ರಾಜೇಂದ್ರನ ಮೇಲೆ
ಕೊಳಲ ಕೊರಳಿಂದೊಗೆವ

ಸಪ್ತಸ್ವರಗಳ ತುಂಬುದನಿಗಳ ಮೇಲೆ
ಯಮುನೆಯ ತಿಳಿನೀರನೆಲ್ಲ ನಂಜುನಂಜಾಗಿಸಿದ
ಕಾಳಿಂಗನ ಹೆಡೆಯ ಮೇಲೆ
ಯಾರ ಮೇಲೆಯೂ ಪ್ರೇಮುಗೈಯಬಹುದು.

.........

ಪ್ರೇಮ
ಗೋಪಿಯರ ಮಾದಕತೆ ತುಂಬಿರುವ ಲೀಲೆಗಳ ಮೇಲೆ
ದನಗಾಹಿಗಳ ತೊದಲುನುಡಿಗಳ ಮೇಲೆ
ಯಶೋದೆಯ ಮಧುರ ಮೊಲೆವಾಲಿನ ಮೇಲೆ
ಬಲರಾಮನ ಹೆಗಲೇರಿದ ನೇಗಿಲ ಕುಳದ ಮೇಲೆ
ಕಂಸನೊಡಲಿನ ಹಗೆತನದ ಹೊಗೆಯ ಮೇಲೆ
ಯಾರನುಳಿಸುವುದುಂಟೊ ಅವರ ಮೇಲಂತು ಸರಿ
ಯಾರನಳಿಸುವುದುಂಟೊ ಅವರ ಮೇಲೂ ಪ್ರೇಮುಗೈಯಬಹುದು.

ಪ್ರೇಮ ಯೋಗದ ಮೇಲೆ
ಪ್ರೇಮ ಭೋಗದ ಮೇಲೆ
ಅದಕ್ಕಿಂತ ಮಿಗಿಲಾಗಿ ಪ್ರೇಮ ತ್ಯಾಗದ ಮೇಲೆ ಗೈಯಬೇಕು.
ನಾಲ್ಕು ಪುರುಷಾರ್ಥಗಳ ಅಮಲು ಬರಿಸುವ
ಜೀವನರಸದ ಮೇಲೆ ಪ್ರೇಮುಗೈಯಬೇಕು.

ಅಂತೆಯೇ
ನಿರ್ಜನಾರಣ್ಯದೊಳೇಕಾಕಿಯಾಗಿ
ಬೇಟೆಗಾರನ ಬಾಣಕ್ಕೆ ತುತ್ತಾಗಿ
ಸಾವನಪ್ಪಿ ಬೀಳುವ ಸ್ವಂತ ಶವದ ಮೇಲೆಯೂ
ಪ್ರೇಮುಗೈಯಬೇಕು !

.........

ಕಾರಣ
ಪ್ರೇಮವೆಂಬುವುದು ಮಾನವನ ಸಂಸ್ಕೃತಿಯ ಸಾರಾಂಶ
ಮಾನವ ಜನಾಂಗದಿತಿಹಾಸದ ಫಲಿತಾಂಶ
ಬರುವ ನಾಳೆಯಂ ತರುವ ಅಭ್ಯುದಯದೊಡಲಾಸೆ
ಒಂದೆ-ಇದೊಂದೆ: ಪ್ರೇಮಂ !

## ನನಗೆನ್ನಿಸುವುದಿಂತು

ಮೂಲ : 'ಕುಸುಮಾಗ್ರಜ'
ಅನು : ಬಿ. ಎ. ಸನದಿ

ನನಗೆನ್ನಿಸುವುದಿಂತು :
ಎರಡು ರೀತಿಯ ಜನರು ಜಗದೊಳಿಹರು
ತಮ್ಮ ನೆತ್ತಿಯ ಮೇಲಿರುವ ಬಾಂದಳವ ಗಮನಿಸವೆ
ಭೂಮಿಯ ಮೇಲೆ
ನಯವಾಗಿ ಹೊಟ್ಟೆ ಹೊಸೆಯುವ ಸಜ್ಜನರು
ಸಮನೆಲದ ಮೇಲೆಯೇ ಜೀವನದ ನಕ್ಷೆಗಳ
ಬರೆಬರೆದು ಬಣ್ಣಗಳ ತುಂಬುವವರು
ನೆಲದ ಮೇಲಿನ ನಿರಾಯಾಸ ನಡೆಯೇ
ಮುನ್ನಡೆ
ಜೀವನದ ನೀತಿ
ಅಂತಿಮ ಮಹತಿಯೆಂದು ನಂಬುವವರು !

... ....

ಇನ್ನೊಂದು ಬಗೆಯವರೊ
ಬಾಂದಳದೊಳೇ ಹಕ್ಕಿಯೊಲು ಹಾರಾಡುತ್ತಿರುವವರು
ಲಕ್ಷ ನಕ್ಷತ್ರಗಳ ಮೇಲೆ ಲಕ್ಷವನಿತ್ತು
ಸ್ವಪ್ನಗಳ ಸೌಧಗಳ ರಚಿಸುತ್ತ ರಂಜಿಸುತ ಜೀವಿಸುವರು

ಇವರು ಮಣ್ಣಿನ ಕಡೆಗೆ ಕಣ್ಣು ಹರಿಸುವರಲ್ಲ
ಆಕಾಶ ಛತ್ರದಲ್ಲಿ ನಕ್ಷತ್ರ ಲೋಕದಲಿ ವಿಹರಿಸುವುದೇ ಬದುಕು
ಅದುವೆ ಬದುಕಿನ ನೀತಿ-
ಬದುಕಿನಂತಿಮ ಮಹತಿಯೆನ್ನುವವರು.

........

ಆದರೆನಗೆನಿಸುವುದು :
ಹೊಟ್ಟೆ ಹೊಸೆವರ ರಟ್ಟೆಗೊಂದಿನಿತು ರೆಕ್ಕೆ ಮೂಡಬೇಕು
ಮೇಲಿಂದ ಮೇಲೆಯೇ
ಹಾರಾಡುತ್ತಿರುವವರ ರೆಕ್ಕೆಗಳನೊಂದಿನಿತು ಮುರಿಯಬೇಕು
ಅವರಿನಿತು ಕೆಳಗೆ
ಮೇಲೆ ಮೇಲಕ್ಕಿವರು
ಗತಿಶೀಲರಾದಂತೆ–
ಯುಗಯುಗಗಳಿಂದಲೂ ಮಾನವತೆಗಂಟಿರುವ
ಗ್ರಹಣ ತಿಳಿಗೊಳ್ಳಬೇಕು.

[ಪನ್ನಾಲಾಲ್ ಪಟೇಲ್ (1912) ಪ್ರಸಿದ್ಧ ಹಾಗೂ ಶಕ್ತಿವಂತ ಗುಜರಾತಿ ಸಣ್ಣ ಕಥೆಗಾರ ಮತ್ತು ಕಾದಂಬರಿಕಾರ. ಸಾಮಾನ್ಯ ಶಿಕ್ಷಣವನ್ನು ಪಡೆದ ಇವರು ಮಾನವೀಯ ಅಂತರ್‌ದೃಷ್ಟಿ, ಗ್ರಾಮೀಣ ಜೀವನವನ್ನು ಗ್ರಹಿಸುವ ಪರಿ ಹಾಗೂ ಅವುಗಳನ್ನು ತಮ್ಮ ಕಥೆ, ಕಾದಂಬರಿಗಳಲ್ಲಿ ತರುವುದರಲ್ಲಿ ಪರಿಪೂರ್ಣತೆಯನ್ನು ಮುಟ್ಟಿದ್ದಾರೆಂದು ಹೇಳುವುದರಲ್ಲಿ ಸಂಶಯವಿಲ್ಲ. ತಮ್ಮ ಹಳ್ಳಿ, ಅದರ ಸರಳ ಶ್ರಮಿಕ ಜನ, ಅವರ ರಾಗ ದ್ವೇಷಗಳು, ಔದಾರ್ಯ ಕೃಪಣತೆಗಳು, ಮೃದುತೆ ಮತ್ತು ಕಠಿನ ವರ್ತನೆ, ಸಾರಳ್ಯ ಮತ್ತು ಕುಹಕಗಳು ಇವುಗಳ ಸಮಗ್ರ ಚಿತ್ರವನ್ನೊಳಗೊಂಡಿರುವ ಅವರ ಕೃತಿಗಳು ಕರುಣಾಜನಕವೂ, ಹೃದಯಸ್ಪರ್ಶಿಯೂ ಆಗಿವೆ.

ಇತ್ತೀಚೆಗೆ ತಮ್ಮ ಕಾದಂಬರಿಗಳಲ್ಲಿ ಪೌರಾಣಿಕ ವಸ್ತುಗಳನ್ನು ಅಳವಡಿಸಿ ಬರೆಯಲು ಪ್ರಾರಂಭಿಸಿದ್ದಾರೆ. ಅನೇಕ ಸಾಹಿತ್ಯಕ ಪ್ರಶಸ್ತಿಗಳನ್ನು ತಮ್ಮ ಕೃತಿಗಳಿಗೆ ಗಳಿಸಿದ್ದಾರೆ. 'ಕಂಕು' ಎಂಬ ಅವರ ಕಥೆಯೊಂದು ಚಲನಚಿತ್ರವಾಗಿ ಯಶಸ್ವಿಯಾಗಿ ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿಯನ್ನು ಪಡೆದುಕೊಂಡಿದೆ.

ಪಟೇಲರ 'ಮಾನ್ವಿನಾ ಭಾವೈ' ಎಂಬ ಕಾದಂಬರಿಗೆ 1985ರ ಭಾರತದ ಅತ್ಯುನ್ನತ ಸಾಹಿತ್ಯ ಪ್ರಶಸ್ತಿ 'ಭಾರತೀಯ ಜ್ಞಾನಪೀಠ ಪ್ರಶಸ್ತಿ' ಲಭಿಸಿದೆ.]

# ಕೊಳಲಗಾರುಡಿ

ಮೂಲ : ಪನ್ನಾಲಾಲ್ ಪಟೇಲ್
ಅನು : ಬಿ. ಜಿ. ಕನಕೇಶಮೂರ್ತಿ

ಜಾತ್ರೆಯ ಕೊನೆ. ಸೆಪ್ಟೆಂಬರ್ ತಿಂಗಳ ಮೋಡಗಳು ಬಣ್ಣದಿಂದ ಕೂಡಿದ್ದವು. ಅಂತೆಯೇ ರಂಗುರಂಗಿನ ಉಡುಗೆತೊಡುಗೆಗಳನ್ನು ಧರಿಸಿರುವ ತರುಣ ತರುಣಿಯರು ತಮ್ಮ ತಮ್ಮ ಊರುಗಳಿಗೆ ವಾಪಸಾಗುವ ಕಡೆಯ ಗಳಿಗೆಯಲ್ಲಿ ತುಂಬಾ ಉತ್ಸುಕರಾಗಿ, ತಮಾಷೆ ಮಾಡುತ್ತ ವಿನೋದದಲ್ಲಿ ಮುಳುಗಿದ್ದರು.

ಆಕಾಶದಲ್ಲಿ ಹಾಗು ಭೂಮಿಯ ಮೇಲಿನ ಚಲನವಲನಗಳು ಬೇರೆ ಬೇರೆಯಾಗಿದ್ದವು. ಜಾತ್ರೆಗೆಂದು ಬಂದ ಜನರು ಒಂದು ದಿಕ್ಕಿನತ್ತ ಹೊರಟಿದ್ದರೆ ಆಕಾಶದಲ್ಲಿನ ಮೋಡಗಳು ಬೇರೊಂದು ದಿಕ್ಕನ್ನು ಹಿಡಿದಿದ್ದವು.

ದೂರದಲ್ಲೊಂದು ಜೋಡಿ ಒಂದು ಮೂಲೆಯಲ್ಲಿ ತುಂಬಾ ಹೊತ್ತಿನಿಂದ ರಹಸ್ಯ ಮಾತುಕತೆಯಲ್ಲಿ ತೊಡಗಿರುವುದನ್ನು ನೋಡಿದರೆ ನಿಶ್ಚಿತವಾಗಿ ಎಲ್ಲಕ್ಕೂ ವಿರುದ್ಧ

ದಿಕ್ಕಿನಲ್ಲಿ ನಡೆಯಲು ನಿರ್ಧರಿಸಿದ್ದರು ಎಂದು ಕಾಣುವುದರಲ್ಲಿ ಯಾವ ಅನುಮಾನವೂ ಬರುತ್ತಿರಲಿಲ್ಲ.

ಆ ಯುವತಿಯು ಕಣ್ಣುಗಳು ಕಂಬನಿದುಂಬಿದ್ದವು. ಆ ಯುವಕ ತನ್ನ ಕೋಲಿನ ಮೇಲೆ ಒರಗಿ ಕುಳಿತಿರುವ ರೀತಿ ಮುಗುಡದ ಚಿತ್ರವನ್ನು ಕಟ್ಟಿಕೊಡುತ್ತಿತ್ತು.

"ನನ್ನ ಅತ್ತೆ ಒಂದು ಚೆಕ್ಕಿಸ ಬಗ್ಗೆ ಒಂದಿಷ್ಟೂ ಯೋಚಿಸುವುದಿಲ್ಲ, ಆದರೆ ನನ್ನ ಬಗ್ಗೆ ಮಾತ್ರ ತುಂಬಾ ತಲೆಕೆಡಿಸಿಕೊಳ್ತಾಳೆ. ಅವಳು 'ಕೊತ್ಲಾ'[1]ದಲ್ಲಿ ಒಂದಿಷ್ಟು ರೊಟ್ಟಿಗಳು, ಒಂದು 'ಕಂಥಿ'[2]ಯ ಕುಡಿಕೆಯನ್ನು ಇಟ್ಟಿರ್ತ್ತಾಳೆ. ಅದರಲ್ಲಿ ತುಪ್ಪದ 'ವಥಿ'[3]ಯನ್ನೇನಾದರೂ ಅಪ್ಪಿತಪ್ಪಿ ಇಟ್ಟಿದ್ದರೆ, ಅದರಲ್ಲಿ ಏನಾದರೂ ಒಂದಿಷ್ಟು ಕಡಿಮೆಯಾದೀತೋ ಇಲ್ಲಪ್ರೋ ಎಂದು ತಿಳಿಯಲು ಅದರ ಮೇಲೆ ಗುರುತು ಮಾಡಿರ್ತ್ತಾಳೆ. ಇಷ್ಟೆಲ್ಲಾ ಆದರೂ ಅತ್ತಿಂದಿತ್ತ ಸುಳಿದಾಡುತ್ತಿರ್ತ್ತಾಳೆ. ಬೆಕ್ಕು ಕೂಡ ಇಲಿಗಳ ಮೇಲೆ ಅಷ್ಟೊಂದು ದ್ವೇಷ ಸಾಧಿಸುವುದಿಲ್ಲ. ಏನಾದರೂ ಇಲಿಗಳಿಂದಲೋ ಅಥವಾ ಬೆಕ್ಕಿನಿಂದಲೋ ತುಪ್ಪದ 'ವಥಿ' ಸ್ವಲ್ಪ ಆ ಕಡೆ ಈ ಕಡೆ ಜರುಗಿದ್ದರೆ ಸಾಕು, ಅವಳು ಇಡೀ ಊರೇ ಕೇಳುವ ಹಾಗೆ ನನ್ನ ಮೇಲೆ ಶಾಪ ಹಾಕಿಕೊಂಡು ತಿರುಗುವುದನ್ನು ನೀನೂ ನೋಡಿರಬಹುದು."

"ನಾನೆಲ್ಲೊ ಬೀದಿ ಬೀದಿ ಅಲೆಯುವ ದನ ಅದ್ಕೋಂಡು ನನ್ನ ಗಂಡನೂ ಕೂಡ ನನ್ನ ಮೇಲೆ ಕಣ್ಣಿಟ್ಟಿರ್ತ್ತಾನೆ. ಯಾವತ್ತಾದರೂ ನಾನೊಬ್ಬಳೇ ಹೊಲದಿಂದ ಮೇವು ತರಲು ಹೋದರೆ ಸಾಕು, ನನ್ನ ಗಂಡನ ಹತ್ತು ವರ್ಷದ ತಂಗಿ ನನ್ನನ್ನು ನೆರಳಿನಂತೆ ಹಿಂಬಾಲಿಸ್ತಾಳೆ. ನಾನು ದಾರಿಯಲ್ಲಿ ಯಾರೊಂದಿಗಾದರೂ ನಕ್ಕರೆ, ಇಲ್ಲಾ ಮಾತನಾಡಿದರೆ ಸಾಕು, ಅವಳು ಅದನ್ನೇ ಬೆಟ್ಟಮಾಡಿ ಅವಳ ಅಣ್ಣನಿಗೆ ಒಂದು ವರದಿ ಒಪ್ಪಿಸ್ತಾಳೆ. ಅವನಾದರೋ ಅವಳನ್ನು ಇಲ್ಲಸಲ್ಲದ ಪ್ರಶ್ನೆಗಳನ್ನು ಕೇಳಿ ದೊಡ್ಡ ರಾದ್ಧಾಂತವನ್ನೇ ಮಾಡಿಬಿಡ್ತಾನೆ. ಆ ಮೇಲೆ ಆ ನೀಚ ನನ್ನ ಮೇಲೆ ಹೇಗೆ ಬೀಳ್ತಾನೆ ಅಂದರೆ...." ಹೀಗೆ ಹೇಳುತ್ತಿರುವ ಅವಳ ಕೆಂಪಾದ ಕಣ್ಣುಗಳು ಕಣ್ಣೀರನ್ನು ಸುರಿಸುತ್ತಿದ್ದವು. ಆ ದೃಶ್ಯ 'ಸರ್ರನೆ ಕಸಿದುಕೊಂಡಾಗ ಕಿತ್ತುಹೋದ ಕೊರಳ ಹಾರದ' ಹಾಗೆ ಕಾಣುತ್ತಿತ್ತು.

ಅವನು : "ನೀನು ತುಂಬಾ ಗಟ್ಟಿಗಳು. ಯಾಕೆ ಈಗ ಹೀಗಾದೆ ? ನಿನ್ನ ತವರಿನವರು ತಮ್ಮ ಕೀರ್ತಿ, ಪ್ರತಿಷ್ಠೆಗಳ ಬಗೆಗೇ ಯೋಚಿಸ್ತಾ ಇದಕ್ಕೆ ಬೇರೆ ಪರಿಹಾರವನ್ನೇ

---

1. ಕೊತ್ಲಾ–ಹಳ್ಳಿಗರು ಆಹಾರ, ಹಾಲು ಮುಂತಾದ ವಸ್ತುಗಳನ್ನು ತುಂಬಿಡಲು ಬಳಸುವ ಮರದ ಪೆಟ್ಟಿಗೆ.
2. ಕಂಥಿ–ಮೊಸರು ಮತ್ತು ಕಡಲೆಹಿಟ್ಟು ಇವುಗಳನ್ನು ಸೇರಿಸಿ ಬೇಯಿಸಿ ತಯಾರಿಸಿದ ಒಂದು ಬಗೆಯ ತೊವ್ವೆ.
3. ವಥಿ–ಊಟದ ಸಮಯದಲ್ಲಿ ತುಪ್ಪವನ್ನು ಹಾಕಲು ಇಟ್ಟಿರುವ ಕುಡಿಕೆ (=ಮಿಳ್ಳೆ).

ಹುಡುಕದೆ ಹೋಗಿದ್ದಾರೆ. ಆದರೆ ನಾನು...." ಎಂದು ಅವಳನ್ನು ಸಂತೈಸುತ್ತಿದ್ದ. ಹೀಗೆ ಹೇಳುವಷ್ಟರಲ್ಲಿಯೇ ಅವನ ಗಂಟಲು ಕಟ್ಟಿತು. "ನಾನೇನಾದರೂ ಮದುವೆ ಯಾಗಿರದಿದ್ದರೆ ಚೆನ್ನಾಗಿತ್ತು. ಆದರೆ ಈಗ ನೋಡು, ಕಾನೂನು ಇಬ್ಬರು ಹೆಂಡಿರನ್ನ ಇಟ್ಟುಕೊಳ್ಳಲು ಅವಕಾಶ ಕೊಡುವುದಿಲ್ಲ, ಹಾಗೇನಾದರೂ ಆಗಿದಿದ್ದರೆ, ಖಂಡಿತ ನಾನು ನಿನ್ನನ್ನು ಮದುವೆ ಮಾಡ್ಕೊಂಡು ಬಿಡ್ತಿದ್ದೆ" ಎಂದು ಮೆಲ್ಲನೆ ಗೊಣಗಿದ.

"ಚಿಂತಿಸಬೇಡಿ ! ನನ್ನ ತವರಿನವರಿಗೆ ಹೇಳಿ; ನಾನಿನ್ನು ಬರ್ತಿೀನಿ" ಎಂದು ತಗ್ಗಿದ ಧ್ವನಿಯಲ್ಲಿ ಹೇಳಿ ಹೊರಡಲು ಅತ್ತ ತಿರುಗಿದಳು.

"ನಿಲ್ಲು, ಒಂದು ನಿಮಿಷ" ಎಂದು ಅವಳನ್ನು ತಡೆದು : "ನೀನು ಇಂತಹ ದುಸ್ಥಿತಿಯಲ್ಲಿದ್ದೀಯಾ ಅಂತ ಮಾತ್ರವಲ್ಲ, ನನ್ನ ಅದೃಷ್ಟ ಚೆನ್ನಾಗಿಲ್ಲದ್ದರಿಂದ ಹೆಜ್ಜೆ ಹೆಜ್ಜೆಗೂ ಜಗಳ ಕಾಯುವ ಹೆಂಡತಿ ನನಗೆ ಸಿಕ್ಕಿದ್ದಾಳೆ. ಯಾರಾದರೂ ನನ್ನ ಹಳ್ಳಿ ಯವರು ನಾವಿಬ್ಬರೂ ಹೀಗೆ ಒಟ್ಟಿಗೆ ಏಕಾಂತದಲ್ಲಿ ಕೂತು ಮಾತನಾಡುವುದನ್ನು ನೋಡಿ ಹೋಗಿ ಅವಳಿಗೆ ಹೇಳಿದರೆ—ಇರಲಿ, ಆ ಜಾಯಿಬಡುಕಿ ನಿನಗೇನೂ ಗೊತ್ತಿಲ್ಲ ದವಳಲ್ಲ ಹೌದಲ್ಲ ? ಆ ದಿನ ಪಾತ್ರೆಗಳಿಗೆ, ದನಕರುಗಳಿಗಂತೂ ಕೆಟ್ಟ ದಿನ. ಅಂತಹ ಬೈಗಳ್ಳುಗಳು ಹೇಗೆ ಬರ್ತವೆ ಅಂದ್ರೆ....!" ಎಂದು ಹೇಳಿದ,

"ಇವತ್ತು ನನಗೆ ಮನೆಯ ಸ್ಥಿತಿ ಹೇಗಿದೆ ಅಂತ ಗೊತ್ತಿಲ್ಲ" ಎಂದು ಅವಳು ಹೊರಡಲು ಅನುವಾದಳು.

ಅಲ್ಲಿಂದ ಅವಳಿನ್ನೂ ಒಂದೆರಡು ಹೆಜ್ಜೆಗಳನ್ನು ಮುಂದೆ ಇಟ್ಟಿರಲಿಲ್ಲ, ಅಷ್ಟ ರೊಳಗೆ ಅವನು ಮತ್ತೆ ಅವಳನ್ನು ತಡೆದು : "ನನ್ನ ಮಾತನ್ನು ಕೇಳು, ಇವತ್ತಿನಿಂದ ಒಳ್ಳೆಯ ಹುಡುಗಿಯಂತೆ, ನಿನ್ನ ನಾದಿನಿಯನ್ನು ನಿನ್ನ ಒಡಹುಟ್ಟಿದ ತಂಗಿಯಂತೆಯೇ ಕಾಣಲು ಶುರುಮಾಡು. ನಿನ್ನ ಅತ್ತೆಯ ಪ್ರತಿಯೊಂದು ಮಾತಿಗೂ ಗೌರವ ಕೊಡು. ನಿನ್ನ ಗಂಡನಿಂದಲೇ ನಿನ್ನ ಕಣ್ಣುಗಳು ಸಂತೋಷದಿಂದ ಮಿನುಗುತ್ತಿವೆ ಅನ್ನುವ ಭಾವನೆ ನಿನ್ನ ಗಂಡನಿಗೆ ಬರುವ ಹಾಗೆ ನಡೆದುಕೋ. ನೀನು ಈಗ ನಿನ್ನ ತವರಿಗೆ ಒಂದು ತಿಂಗಳಿಗೋ, ಎರಡು ತಿಂಗಳಿಗೋ ಹೋಗುತ್ತಿದ್ದೀಯಲ್ಲಾ ಅದನ್ನು ನಿಲ್ಲಿಸು. ಯಾಕೆಂದರೆ ನಿನ್ನ ತವರಿನವರೇನು ನಿನ್ನ ಕಷ್ಟದ ಬಗೆಗೆ ನಿಗಾ ತಗೊಂಡಿಲ್ಲವಲ್ಲಾ ? ಮತ್ಯಾಕೆ ಅಲ್ಲಿಗೆ ಹೋಗ್ತೀಯಾ ? ಅವರು ನೀನು ಬರುವಂತೆ ಸುದ್ದಿ ಕಳಿಸಿದರೂ ಕೂಡ ನೀನು, ಮನೆಯಲ್ಲಿ ತುಂಬಾ ಕೆಲಸ, ಬಿಡುವಿಲ್ಲ ಅಂತ ಹೇಳು. ಆಗ ನಿನಗೆ ನಿನ್ನ ಗಂಡನ ಮನೆಯ ಬಗೆಗೆ ಹೆಚ್ಚು ಪ್ರೀತಿಯಿದೆ ಅಂತ ನಿನ್ನ ಅತ್ತೆಗೆ ಸಹ ನಿನ್ನ ಮೇಲೆ ನಂಬಿಕೆ ಬರ್ತದೆ. ನೀನು ನನ್ನ ಬಗ್ಗೆ ಒಂದು ಮಾತನ್ನೂ ಆಡಬಾರದು. ಎಲ್ಲಾದರೂ ನಾವು ಒಬ್ಬರಿಗೊಬ್ಬರು ಸಿಕ್ಕರೆ ನೀನು ನನ್ನನ್ನು ನೋಡದೆ ಮುಖವನ್ನು ಆ ಕಡೆಗೆ ತಿರುಗಿಸಿಕೊಂಡು ಸುಮ್ಮನೆ ಹೊರಟುಹೋಗು ಅರ್ಥವಾಯಿತಾ ?" ಎಂದ.

ಅದಕ್ಕವಳು "ಇನ್ನೇನಾದರೂ ಉಳಿದಿದೆಯಾ ?" ಎಂದು ಕೇಳಿದಳು.

"ನೀನು ಒಂದು ಸಲ ಅವರ ನಂಬಿಕೆಯನ್ನು ಗಳಿಸಿಬಿಟ್ಟರೆ ಸಾಕು, ಒಂದು ದಿನ ನಾವಿಬ್ಬರೂ ಎಲ್ಲಾದರೂ ದೂರ ಓಡಿಹೋಗಿ ಅವರಿಗೆ ಆಶ್ಚರ್ಯ ಹುಟ್ಟಿಸಬಹುದು" ಎಂದ.

ಅವನ ಕೊನೆಯ ಮಾತನ್ನು ಕೇಳುತ್ತ ಆವೇಶದಿಂದ ಕೆರಳಿದ ಅವಳ ಮುಖ ಉಗ್ರವಾಯಿತು. ಅವಳು : "ಛೀ! ಯಾರೇ ಆದರೂ ಎಲ್ಲವನ್ನೂ ಬಿಡಬಹುದು, ಆದರೆ ಹುಟ್ಟಿದ ಮನೆಯಿಂದ ದೂರವಿರಲು ಆಗುವುದೇ ಇಲ್ಲ" ಎಂದಳು.

"ಹಾಗಾದರೆ ನೀನು ನರಕವನ್ನು ಅನುಭವಿಸಬೇಕಾಗ್ತದೆ, ಒಂದಿಷ್ಟಾದರೂ ಯೋಚಿಸು. ನಿನ್ನ ಗಂಡ ಇಲ್ಲಿಂದ ಎರಡು ಮೈಲಿ ದೂರದಲ್ಲಿದ್ದಾನೆ. ಆದರೆ, ಅವನು ತನ್ನ ಕುಕ್ಕುವ ಕಣ್ಣುಗಳಿಂದ ಏನು ಮಾಡ್ತಾನೆ ಅನ್ನುವುದನ್ನು ಕಾದು ನೋಡು" ಎಂದ.

"ಇರಬಹುದು ! ಯಾರಾದರೂ ನಮ್ಮೂರಿನವರು ಹೋಗಿ ಅವನಿಗೆ ಹೇಳಿದರೆ ಸಾಕು. ಅವನು ನನ್ನ ಚರ್ಮವನ್ನು ಸುಲಿದುಬಿಡ್ತಾನೆ. ನಿನ್ನ ಹೆಸರನ್ನು ಕೇಳುತ್ತಿದ್ದ ಕ್ಷಣದಲ್ಲೇ ಕೋಪದಿಂದ ನನ್ನನ್ನು ಸುಟ್ಟುಬಿಡ್ತಾನೆ."

"ಹಾಗಾದರೆ, ಸರಿ. ನಾನು ಹೇಳಿದಂತೆ ಆರು ತಿಂಗಳು ಮಾಡು."

"ನೀನೇನು ಮಾಡ್ತೀಯಾ ?" ಎಂದವಳು ಕೇಳಿದ್ದಕ್ಕೆ, ಅವನು ಬಹಳ ಅಚಲವಾದ ನಿರ್ಧಾರದಿಂದ ಒಡನೆಯೇ : "ನಾನು ಸರಿಯಾಗೇ ಮಾಡ್ತೀನಿ, ನೀನು ನಿನ್ನ ತವರನ್ನು ಬಿಡಬೇಕು, ಇಲ್ಲ ಈ ದಾರಿಯಲ್ಲಿ ಹೋಗಬೇಕು" ಎಂದು ಹೇಳಿದ. "ಈ ಸಲ ಅವನು ಖಂಡಿತ ನನ್ನನ್ನು ದೂರ ಕರಕೊಂಡು ಹೋಗ್ತಾನೆ" ಎಂದವಳು ಹೇಳಿದ್ದಕ್ಕೆ ಅವನು ಜೋರಾಗಿ ನಕ್ಕುಬಿಟ್ಟ.

ಅಷ್ಟೇ ಅಲ್ಲ. ಮುಂದಿನ ಆರು ತಿಂಗಳಿಗೆ ನಡೆಯುವ 'ಅಂಘಿ' ಜಾತ್ರೆಯಲ್ಲಿ ಮತ್ತೆ ಅವಳನ್ನು ಭೇಟಿಯಾಗಲು ನಿರ್ಧರಿಸಿದ. ಅವಳು ಹೋಗುವಾಗ ಆಗತಾನೇ ತನ್ನಲ್ಲಿ ಮೂಡಿದ ಹೊಸ ಭರವಸೆಯೊಂದಿಗೆ ಅವನತ್ತ ಬೀರಿದ ನಲ್ಮೆಯ ನೋಟವು ಅರ್ಜುನನು ಮತ್ಸ್ಯಭೇದವನ್ನು ಮಾಡಿದಾಗ ದ್ರೌಪದಿಯು ಅವನನ್ನು ನೋಡಿದ ನೋಟದಂತೆಯೇ ಇತ್ತು.

ಅವಳ ನಡಿಗೆಗಳು ಬಹಳ ತವಕದಿಂದ ಉದ್ರೇಕಗೊಂಡು ಮನೆಯನ್ನು ತಲುಪಲು ಅಸ್ವಸ್ಥಳಾಗಿ ಕಂಡು, ಹೊಸ ನಾಟಕವನ್ನೇ ಅಭಿನಯಿಸಲು ಆರಂಭಿಸಿದಳು.

ಅವಳು ಜಾತ್ರೆಯ ಕೊನೆಯನ್ನು ತಲುಪುತ್ತಿದ್ದ ಹಾಗೆಯೇ ತನ್ನ ಜೊತೆಯವರು ತನಗಾಗಿ ಕಾಯುತ್ತಿದ್ದುದನ್ನು ಕಂಡಾಗ ತಕ್ಷಣ ಅವಳ ಕಾಲುಗಳು ನಿಂತವು. ಜೋರಾಗಿ "ನಿಲ್ಲಿ, ಒಂದು ನಿಮಿಷ, ಈಗಲೇ ಬಂದುಬಿಡ್ತೀನಿ" ಎಂದು ಕೂಗಿದಳು.

ತನ್ನ ಸೀರೆಯ ಸೆರಗಿನ ತುದಿಯಲ್ಲಿ ಗಂಟುಕಟ್ಟಿದ್ದ ಹಣವನ್ನು ಬಿಚ್ಚಿಕೊಂಡು ತಿರುಗಿ ಜಾತ್ರೆಯೊಳಗೆ ಹೋದಳು.

ಮೊಟ್ಟ ಮೊದಲ ಅಂಗಡಿಯಲ್ಲಿ ತನ್ನ ನಾದಿನಿಗೆಂದು ಮಣಿಗಳ ಸರವೊಂದನ್ನು ಖರೀದಿಸಿದಳು. ಒಂದು ಕ್ಷಣ 'ತನ್ನ ಅತ್ತೆಗೆ ಏನನ್ನು ತೆಗೆದುಕೊಂಡು ಹೋಗುವುದು?' ಎಂದು ಯೋಚಿಸಿದಳು. ಕೊನೆಗೆ ನಾಲ್ಕಾಣೆಗಳನ್ನು ಕೊಟ್ಟು ಸುಗಂಧದ ನಶ್ಯವನ್ನು ತೆಗೆದುಕೊಂಡಳು.

ತನ್ನ ಗಂಡನಿಗಾಗಿ ಏನಾದರೂ ಚೆನ್ನಾಗಿರುವುದನ್ನು ಕೊಳ್ಳಬೇಕೆಂದುಕೊಂಡಳು. ಆದರೆ ಏನನ್ನು ಕೊಳ್ಳುವುದು ಎಂದು ತಿಳಿಯಲಿಲ್ಲ.

ತನ್ನ ಹತ್ತಿರ ಹಣವಿಲ್ಲದಿದ್ದರೂ ಸುಮ್ಮನೆ, "ಈ ಹಿತ್ತಾಳೆಯ ಕೊಳಲು ಎಷ್ಟಾಗ್ತದೆ, ಪೊಹ್ರಾಜಿ?" ಎಂದು ಕೇಳಿದಳು.

ಪೊಹ್ರಾಜಿ: "ಹೊರಳುವ ಕಣ್ಣುಗಳ ಹೆಂಗಸೊಬ್ಬಳು ಕೊಳಲಿನ ಬೆಲೆ ಕೇಳ್ತಿದ್ದಾಳಲ್ಲ!" ಎಂದು ಅಚ್ಚರಿಗೊಂಡ. "ನಿನಗೆ ಕೊಳಲು ಬೇಕಂತಾನೆ? ಅದರ ಬೆಲೆ ಒಂದು ರೂಪಾಯಿ ನಾಲ್ಕು ಆಣೆ ಅಷ್ಟೇ" ಎಂದ.

ಕೊಳಲನ್ನು ಕೊಳ್ಳುವ ತನ್ನ ನಿರ್ಧಾರದಿಂದ ತಾನೇ ಚಕಿತಳಾಗಿ, ನಿಜವಾಗಿ ಅದನ್ನು ಕೊಳ್ಳುವವಳಂತೆ! "ಸ್ವಲ್ಪ ಕಡಿಮೆ ಮಾಡಿಕೋ?" ಎಂದು ಚೌಕಾಸಿ ಮಾಡ ತೊಡಗಿದಳು.

"ಆಯ್ತು, ಒಂದು ರೂಪಾಯಿ ಕೊಡು, ಜಾತ್ರೆಯೆಲ್ಲಾ ಮುಗೀತು, ತಗಿ ಬೇಗ ದುಡ್ಡು."

"ತಾಳು ಒಂದು ನಿಮಿಷ, ನೋಡ್ತೀನಿ ತಗೊಳಕ್ಕೆ ಆಗ್ತಾದಾ ಅಂತ" ಎಂದು ತನ್ನನ್ನು ಕಾಯುತ್ತಿದ್ದ ಗುಂಪಿನೆಡೆಗೆ ಬಂದು: "ನಿಮ್ಮಲ್ಲಿ ಯಾರಾದರೂ ಒಂದು ರೂಪಾಯಿ ಕೊಡ್ತೀರಾ? ನಾನು ಮನೆಗೆ ಹೋದ ಮೇಲೆ ವಾಪಸ್ಸು ಕೊಡ್ತೀನಿ" ಎಂದು ಕೇಳಿದಳು.

ಅವರಲ್ಲೊಬ್ಬ ಒಂದು ರೂಪಾಯಿ ಇಟ್ಟುಕೊಂಡಿದ್ದ. ಅದನ್ನು ಅವಳ ಕೈಗೆ ಕೊಡುತ್ತ "ಈಗಲೇ ಏನು ತಗೋಬೇಕು ಅನ್ತಿದ್ದೀಯಾ ಬಾಬಿ?" ಎಂದು ಕೇಳಿದ.

ಅದಕ್ಕವಳು "ಅದೇನು ಅಂತ, ತಂದ ಮೇಲೆ ನೋಡು" ಎಂದು ಹೇಳಿ ರೂಪಾಯಿಯೊಂದಿಗೆ ಅಲ್ಲಿಂದ ಹೊರಟಳು.

ಕೂಡಲೇ ಅವಳು ಕೊಳಲೊಂದನ್ನು ಕೈಯಲ್ಲಿ ಹಿಡಿದುಕೊಂಡು ಬಂದಳು. ಇಡೀ ಜನ ಅಚ್ಚರಿಯಿಂದ ಒಬ್ಬರ ಮುಖವನ್ನೊಬ್ಬರು ನೋಡಿದರು, ಮತ್ತೊಮ್ಮೆ ಕೊಳಲ ಕಡೆಗೆ ನೋಡಿದರು.

ಅವಳು ಆ ಕೊಳಲನ್ನು ತನ್ನ ಗಂಡನಿಗಾಗಿ ತಂದಿದ್ದಾಳೆ ಎಂಬುದು ತಿಳಿದ ಮೇಲೆ ಅವಳ ಸ್ನೇಹಿತರಲ್ಲಿ ಒಬ್ಬರು "ನೀನು ನಿನ್ನ ಗಂಡನಿಗಾಗಿ ಈ ಕೊಳಲು ತಂದಿದ್ದೀಯಾ, ಆದರೆ ಒಂದಲ್ಲ ಒಂದು ದಿನ ಆ ಕೊಳಲಿನಿಂದಲೇ ಹೊಡೆತ ತಿನ್ತೀಯಾ ಅನ್ನೋದನ್ನು ಮರೆಯಬೇಡ" ಎಂದರು.

ಅವಕ್ಕವಳು ಸಂತೋಷದಿಂದಲೇ "ಹಾಗೇನಾದರೂ ಆದರೆ ಅದನ್ನು ನಾನು ಅನುಭವಿಸ್ತೀನಿ" ಎಂದು ಹೇಳಿ ತನ್ನೊಳಗೇ "ಏನೇ ಆದರೂ, ಇದು ಆರು ತಿಂಗಳ ವರೆಗೆ ಮಾತ್ರ" ಅಂದುಕೊಂಡಳು.

ಅವಳು ಮನೆಯನ್ನು ತಲುಪುವ ವೇಳೆಗಾಗಲೇ ಕತ್ತಲಾಗಿತ್ತು. ತಾನು ಆ ಮೂವರಿಗೆ ತಂದ ವಸ್ತುಗಳನ್ನು ಕೊಡಲು "....ಓಹ್ ! ಇವತ್ತು ಯಾವ ದಿಕ್ಕಿನಲ್ಲಿ ಸೂರ್ಯ ಹುಟ್ಟಾನೆ ? ನಿನ್ನ ಅತ್ತೆಗೆ ಈ ನಸ್ಯ ತಂದಿದ್ದೀಯಲ್ಲಾ ?" ಎಂದು ಫಟ್ಟನೆ ಅವಳ ಅತ್ತೆ ಕೇಳಿಯೇ ಬಿಟ್ಟಳು.

ಎದುರು ಕೋಣೆಯಲ್ಲಿ ಹಗ್ಗದ ಮಂಚದ ಮೇಲೆ ಕುಳಿತು ತನ್ನ ತಂಗಿಯ ಕೈಯಲ್ಲಿ ಕಳಿಸಿದ ಕೊಳಲನ್ನು ದೀಪದ ಬೆಳಕಿನಲ್ಲಿ ಪರೀಕ್ಷಿಸುತ್ತಾ ಕುಳಿತ ಅವಳ ಒರಟ ಗಂಡ: "ನನಗೇನು ಇವಳು ಮರುಳು ಮಾಡ್ತಿದ್ದಾಳೋ ಅಥವಾ ಏನು ?" ಎಂದು ಆಶ್ಚರ್ಯಗೊಂಡ.

ಅದೃಷ್ಟವಶಾತ್ ಅವಳು ಕೊಳಲನ್ನು ತಂದಿದ್ದಳು. ಬೇರೆ ಏನಾದರೂ ತಿಂಡಿ ಯನ್ನು ತಂದಿದ್ದರೆ ಅವನು ಖಂಡಿತ ಆ ಪೊಟ್ಟಣವನ್ನೇ ನಾಯಿಗೆ ಆಹಾರವಾಗಿ ಬಿಸಾಡುತ್ತಿದ್ದ !

ಮರುದಿನವೇ ಅವನು ಊರಿನೊಳಗೆಲ್ಲಾ "ನೆನ್ನೆ ದಿನ ಅವಳು ಜಾತ್ರೆಯಲ್ಲಿ ಅವಳ ಅಣ್ಣಂದಿರೊಂದಿಗೆ ಇದ್ದಳೋ ಅಥವಾ ನಿಮ್ಮ ಜೊತೆಯಲ್ಲಿ ಬಂದಿದ್ದಳೋ" ಎಂದು ವಿಚಾರಿಸಿದ.

ಆದರೆ ಅವರೆಲ್ಲರಿಗೂ ಈಗಲೂ ಅವನು ತುಂಬಾ ಸಂಶಯ ಸ್ವಭಾವದವನು, ಅತಿಯಾಗಿ ವರ್ತಿಸುವವನು ಎಂದು ಗೊತ್ತು. ಆದ್ದರಿಂದ ಜಾತ್ರೆಯಲ್ಲಿ ಇಬ್ಬರು, ಅವಳು ತನ್ನ ತಾಯಿಯ ಕಡೆಯ ವ್ಯಕ್ತಿಯೊಂದಿಗೆ ಮಾತನಾಡುತ್ತಿರುವುದನ್ನು ನೋಡಿ ದ್ದರೂ ಅದರ ಬಗೆಗೆ ಏನನ್ನೂ ಹೇಳಲಿಲ್ಲ. ಅವಳು ಅದೇ ಊರಿನವರಿಂದ ಒಂದು ರೂಪಾಯಿಯನ್ನು ಸಾಲವಾಗಿ ತೆಗೆದುಕೊಂಡಿದ್ದರೂ ಎಲ್ಲವೂ ಸರಿಹೋಯ್ತು.

ಅಷ್ಟಾದರೂ, ಪ್ರತಿಸಾರಿಯೂ ಆ ಕೊಳಲನ್ನು ನುಡಿಸಲು ತೆಗೆದುಕೊಳ್ಳು ತ್ತಿದ್ದ ಆದರೂ ಜೀವಾಗ್ನಿಯಿಂದ ಬೆಂದವನಂತೆ "ನನಗೆಲ್ಲಾ ಗೊತ್ತಿರುವಂತೆ, ಆ ಪಾಪಿ ಹೆಂಗಸು ನನ್ನನ್ನು ಮರುಳು ಮಾಡ್ತಿದ್ದಾಳೆ" ಎಂದು ವೇದನೆಪಡುತ್ತಿದ್ದ. ಆದರೆ ಅವಳು ಮರುಳುಗೊಳಿಸುತ್ತಿರುವ ಪ್ರಶ್ನೆಯೆಲ್ಲಿ ಬಂತು ? ಬದಲಾಗಿ ಅವಳು ಎಷ್ಟೊಂದು ಬದಲಾಯಿಸಿದ್ದಾಳೆಂದರೆ....

ಅವಳು ತನ್ನ ಅತ್ತೆಗೆ ಯಾವ ದೂರನ್ನೂ ಹೇಳುತ್ತಿರಲಿಲ್ಲ. ಪ್ರಾರಂಭದಲ್ಲಿ "ನಾನೇನು ಇನ್ನೂ ಎರಡು ಕೈಗಳನ್ನು ಹೊಂದಿದ್ದೀನಾ....ನಾನೇನಾದರೂ ರೆಕ್ಕೆಗಳನ್ನು ಹೊಂದಿದ್ದರೆ ಬೇಗ ಹಾರಿಹೋಗಿ ನೀರು ತರ್ತಿದ್ದೆ ! ನೀವು ಸುಮ್ಮನೆ ಮನೆಯಲ್ಲಿ ಕುಳಿತು ಹೇಳಿದ್ದರೆ ಸಾಕಾಗಿತ್ತು, ಒಬ್ಬರು ಹೇಳಿದಷ್ಟು ಸುಲಭನಾ ಕೆಲಸ ಮಾಡೋದು ? ಯಾರು ಕಷ್ಟ ಪಡ್ತಾರೋ ಅವರಿಗೆ ಗೊತ್ತು ಅದರ ಬಾಧೆ !" ಎನ್ನುತ್ತಿದ್ದಳು.

ತನ್ನ ಗಂಡನಿಗೂ ಕೂಡ : "ದೇವರು ನನಗೆ ನಾಲಗೆ ಕೊಟ್ಟಿರೋದರಿಂದ ನಾನು ಮಾತಾಡ್ತೀನಿ. ಯಾರದೋ ಸಾವಿಗೆ ನಾನ್ಯಾಕೆ ಅಳಬೇಕು ? ನಾನು ನಗ ಬಾರದಾ ? ನಾನ್ಯಾಕೆ ಅವನ ಜೊತೆಗೆ ಮಾತಾಡಬಾರದು ? ಅವನೇನು ನನ್ನ ವೈರೀನಾ ? ಪಾಪ, ಅವನೇನೂ ಮೋಸಗಾರನಲ್ಲ. ಹೆಚ್ಚಾಗಿ ನೀನೇ ಕಾಮಾಲೆ ಕಣ್ಣಿ ನಿಂದ ನೋಡ್ತಾ ಇದ್ದೀಯಾ !" ಎಂದು ಹರಿತವಾದ ಉತ್ತರಗಳನ್ನು ಕೊಡುತ್ತಿದ್ದಳು.

ಅವನೇನಾದರೂ ಅವಳ ಮೇಲೆ ಕೈಯೆತ್ತಿದರೆ ಅವಳೂ ಸಹ ಅಗೌರವದಿಂದ "ಪಾಪಿ, ನೀನು ಕಟುಕ ! ನೀನು ರಟ್ಟೆಯಲ್ಲಿ ಅಷ್ಟೊಂದು ಬಲವಿದ್ದರೆ ಯಾಕೆ ಜೋರಾಗಿ ರೋನ ಹತ್ತಿರ ಗುದ್ದಾಡಬಾರದು ? ನಿನ್ನ ಬಲಾನ ಇಲ್ಯಾಕೆ ಹೆಂಡತಿ ಮುಂದೆ ತೋರಿ ಸ್ತಿದ್ದೀಯಾ ?" ಎಂದು ನೋವಿನಿಂದ ಕೂಗಾಡಿ ಬೈದು ಬಿಡುತ್ತಿದ್ದಳು.

ಆದರೆ ಈಗ, ತನ್ನ ಸಂಶಯಂದ ಪತಿಗೆ; "ಹೌದು, ನನ್ನ ಈ ಪೆದ್ದ ಸಾಕಾಗಲ್ಲಾ ಅಂತ ನಾನು ಅವನನ್ನು ಹಚ್ಕೊಂಡಿದ್ದೀನಿ. ಅವನೇನಾದರೂ ಜಾಣನಾಗಿದ್ದರೆ, ಲೋಕದ ಜನರೆಲ್ಲಾ ಒಂದೇ ರೀತಿ ಇರಲ್ಲ ಅಂತ ತಿಳ್ಕೊಂತಿದ್ದ" ಎಂದು ತನ್ನ ನರ್ತಿ ಸುವ ಕಣ್ಣುಗಳಿಂದ ಉತ್ತರಿಸುವಳು.

ಇಷ್ಟು ಹೇಳಿದರೂ, ಅವಳ ಮಾತುಗಳಿಂದ ಅವನು ಸಮಾಧಾನ ಹೊಂದಲಿಲ್ಲ. "ನೀನು ನನಗೆ ನಿಜ ಹೇಳು, ಮೊದಲೆಲ್ಲ ಅವಳ ಬಗ್ಗೆ ಎಲ್ಲ ಕಥೆಗಳನ್ನೂ ತಂದು ನನಗೆ ಹೇಳ್ತಿದ್ದೆ, ಈಚೀಚೆಗೆ ಯಾಕೆ ಏನನ್ನೂ ಹೇಳ್ತಿಲ್ಲ ? ಹೇಳು" ಎಂದು ತನ್ನ ತಂಗಿ ಯನ್ನೂ ಪೀಡಿಸುತ್ತಿದ್ದ.

"ನಾನು ತಾಯಾಣೆಗೂ ಹೇಳ್ತೀನಿ ! ಅತ್ತಿಗೆಯಿಂದೇನಾದರೂ ತಪ್ಪು ಸಿಕ್ಕರೆ ತಾನೇ ನಾನು ಹೇಳೋಕೆ ಆಗುವುದು ? ಅವಳು ನನ್ನ ಹತ್ತಿರ ಈಗ ಮೊದಲಿನಂತೆ ಅಣಕವಾಗಿ ಮಾತಾಡ್ತಿಲ್ಲ. ನಿನ್ನ ಮತ್ತು ಅಮ್ಮನ ಬಗೆಗೂ ಒಳ್ಳೆಯ ಮಾತನ್ನೇ ಆಡ್ತಾಳೆ" ಎಂದು ನಮ್ರವಾಗಿ ಹೇಳುವಳು.

ಅದು ನಿಜವೂ ಆಗಿತ್ತು.

ಅವಳು ಮೊದಮೊದಲು ತನ್ನ ನಾದಿನಿಯ ಜೊತೆ ಅವಳ ದೇಹದ ಕುಣಿಯುವ ಅಂಗಾಂಗಗಳ ಬಗ್ಗೆ ಕಟಕಿ ಮಾತುಗಳನು ಬಿಟ್ಟರೆ ಹೆಚ್ಚೇನೂ ಮಾತನಾಡುತ್ತಿರಲಿಲ್ಲ. ಅವುಗಳನ್ನು ತನ್ನ ಕಣ್ಣಿನಲ್ಲಿ ಬಿದ್ದ ಧೂಳಿನ ಕಸದಂತೆ ಕಾಣುತ್ತಿದ್ದಳು.

ಆದರೂ ಸಹ ಅಂತಹ ತಪ್ಪನ್ನೇನೂ ಅವಳು ಮಾಡಿರಲಿಲ್ಲ. ತನ್ನ ಗಂಡ ಮತ್ತು ಅತ್ತೆಯಿಂದ ಅಪಮಾನಿತಳಾದ ಅವಳು ಆ ಸಿಟ್ಟನ್ನು ತನ್ನ ಎಳೆಯ ನಾದಿನಿಯ ಮೇಲೆ ತೀರಿಸಿಕೊಳ್ಳುತ್ತಿದ್ದಳು. ತುಂಬಿದ ನೀರಿನ ಬಿಂದಿಗೆಯನ್ನು ಇಡುವಾಗ ಜೋರಾಗಿ ಅವಳ ತಲೆಯ ಮೇಲೆ ಕುಕ್ಕುತ್ತಿದ್ದಳು. ಅಲ್ಲದೆ ಹೊರಲಾರದ ಭಾರ ವಾದ ಹುಲ್ಲಿನ ಹೊರೆಯನ್ನು ಸಣ್ಣದಾಗಿ ಕಾಣುವಂತೆ ಬಿಗಿದು ಕಟ್ಟಿ ಅವಳ ತಲೆಯ ಮೇಲೆ ಹೇರುತ್ತಿದ್ದಳು.

ಆದರೆ ಈ ಬೆಳಿಗ್ಗೆಯಿಂದ ತನ್ನ ನಾದಿನಿಯೊಂದಿಗೆ ಬಹಳ ಪ್ರೀತಿಯಿಂದ ಮಾತ

ನಾಡುವುದಷ್ಟೇ ಅಲ್ಲದೆ ಅವಳ ಅತ್ತೆಯೂ ಕೂಡ ಸೊಸೆಯ ಬಗ್ಗೆ ವಾತ್ಸಲ್ಯದ ಭಾವನೆಯನ್ನು ತಾಳಿದಳು.

ಅತ್ತಿಗೆಯು ನೀರಿನ ಬಿಂದಿಗೆಯನ್ನು ಹುಡುಗಿಯ ತಲೆಯ ಮೇಲೆ ಮೆತ್ತಗೆ ಇಡುವಳು. ಅದೇನಾದರೂ ಸರಿಯಾಗಿ ತಲೆಯ ಮೇಲೆ ಕೂತಿರದಿದ್ದರೆ ತಾನೇ ಸರಿಯಾಗಿ ಕೂರಿಸುವಳು.

ದನಕರುಗಳಿಗೆ ಹೊರಗಿನಿಂದ ಹುಲ್ಲನ್ನು ತರುತ್ತಿರುವಾಗ "ನಿನಗೆ ಹೊರೆ ಭಾರವಾಯ್ತು ಅನಿಸ್ತಾ ಇದೆಯಾ ? ಸ್ವಲ್ಪ ಸುಧಾರಿಸಿಕೋತೀಯಾ ? ನಾನೂ ಸ್ವಲ್ಪ ದೂರ ತಗೋಳ್ಲಾ ? ಎಂದು ನಾದಿನಿಯನ್ನು ಕೇಳುವಳು.

ಹುಡುಗಿಯ ತಲೆಯ ಮೇಲಿನ ಹೊರೆಯ ಭಾರವೂ ಕಡಿಮೆಯಾಗಿತ್ತಲ್ಲದೆ, ಅವಳ ಅತ್ತಿಗೆಯು ತನ್ನ ಪ್ರೀತಿಯ ಮಾತುಗಳಿಂದ ಅದರ ತೂಕವನ್ನು ಇನ್ನಷ್ಟು ಕಡಿಮೆ ಮಾಡಿದ್ದಳು.

ನಾಲ್ಕು ತಿಂಗಳ ನಂತರ ಅವಳ ಅತ್ತೆಯಷ್ಟೇ ಅಲ್ಲ, ಗಂಡನೂ ಸಹ, 'ಇವಳು ಈಗ ನಿಜವಾಗಿ ಬದಲಾಯಿಸಿದ್ದಾಳೆ' ಎಂದು ಸಮಾಧಾನಪಟ್ಟರು.

ಒಮ್ಮೆ ಮನೆಯಲ್ಲಿ ಅವನ ತಾಯಿ ಹಾಗೂ ಇತರರು ಆ ಯುವಕನ ವಿಷಯವಾಗಿ ಮಾತನಾಡಲು ಆರಂಭಿಸಿದಾಗ ಅವಳು ಆ ಮಾತುಗಳನ್ನು ಕೇಳಿಸಿಕೊಳ್ಳಲು ಕೂಡ ಮನೆಯಲ್ಲಿ ನಿಲ್ಲಲಿಲ್ಲ. ಸುಮ್ಮನೆ ತನ್ನ ನಾದಿನಿಯನ್ನು ಜೊತೆಯಲ್ಲಿ ಕರೆದುಕೊಂಡು ಹೊಲಕ್ಕೆ ಹೋದುದನ್ನು ಅವಳ ಗಂಡನು ಗಮನಿಸಿದ.

ಇವೆಲ್ಲಕ್ಕಿಂತ ಮಿಗಿಲಾಗಿ ಅವಳು ರಾತ್ರಿಯಲ್ಲಿ ಮಾಡಿದ ಕೆಲಸಗಳು ವ್ಯರ್ಥ ಪಡಿಸಿದ್ದೆಂದರೆ....

ಮೊದ ಮೊದಲು ಅವಳು ತನ್ನ ಮನೆಯ ಕೆಲಸಗಳಲ್ಲಿಯೇ ತೊಡಗಿ, ರಾತ್ರಿಯ ಹೊತ್ತು ತನ್ನ ಗಂಡನಿಗಾಗಲೀ, ಅತ್ತೆಗಾಗಲೀ ಹಾಸುಗೆಯನ್ನು ಹಾಸುತ್ತಿರಲಿಲ್ಲ. ಬೆಳಿಗ್ಗೆ ಎಲ್ಲ ಹಾಸುಗೆಗಳನ್ನು ಸುತ್ತಿಟ್ಟಿದ್ದರೂ ತನ್ನ ಹಾಸುಗೆಯನ್ನು ಹಾಗೆಯೇ ಬಿಟ್ಟಿರುತ್ತಿದ್ದಳು. ಆ ಸಮಯದಲ್ಲಿ ಸಾಮಾನ್ಯವಾಗಿ ಮಲಗಿರುತ್ತಿದ್ದ ಅವಳ ಗಂಡ ತನ್ನ ಪಕ್ಕದ ಹಾಸುಗೆ ಹಾಗೆಯೇ ಹರಡಿಕೊಂಡಿರುವುದನ್ನು ಗಮನಿಸಿದ್ದ.

ಆದರೆ ಈಗ ಉಳಿದವರಿನ್ನೂ ಊಟ ಮಾಡುತ್ತಿರುವಾಗಲೇ ಅವಳು ತನ್ನೆಲ್ಲಾ ಮನೆಗೆಲಸಗಳನ್ನೂ ಮುಗಿಸಿ ನಾಲ್ಕೂ ಹಾಸುಗೆಗಳನ್ನು–ಎರಡು ಮನೆಯ ಮುಂಭಾಗದಲ್ಲಿಯೂ, ಉಳಿದೆರಡನ್ನೂ ಅಂಗಳದ ಎದುರಿನ ರೂಮಿನಲ್ಲಿಯೂ ಹಾಸುತ್ತಿದ್ದಳು.

ತನ್ನ ಅತ್ತೆಯು ನೆರೆಯುವ ರೋದಿಗೆ ಮುಂದಿನ ಕೊಠಡಿಯಲ್ಲಿ ಹರಟೆ ಹೊಡೆಯುತ್ತಿದ್ದರೆ ಅವಳು ಸುಮ್ಮನೆ ವರಾಂಡದ ರೂಮಿಗೆ ಬರುತ್ತಿದ್ದಳು...

ಹಿಂದಿನ ದಿನಗಳಲ್ಲಿ, ಅವಳ ಗಂಡನೇನಾದರೂ ಹೊಡೆದರೆ, ಒಂದು ವಾರದ ವರೆಗೂ ಅವನೊಡನೆ ಮಾತನ್ನೇ ಆಡುತ್ತಿರಲಿಲ್ಲ, ಅವನೇನಾದರೂ ಬೈದರೆ ಎರಡು

ದಿಸ ಮಾತು ಬಿಟ್ಟು ಬಿಡುತ್ತಿದ್ದಳು. ಅವನೇನಾದರೂ–ಎಂದಿನಂತೆ-ಹಲ್ಲುಗಳನ್ನು ಕಡಿದರೆ ಅವಳೂ ಮುನಿಸಿಕೊಳ್ಳುತ್ತಿದ್ದಳು. ಒಂದು ಸಲವೂ ಗಂಡನ ಹಾಸುಗೆಗೆ ಹೋಗುತ್ತಿರಲಿಲ್ಲ.

ಆದರೆ ಈಗ, ನೇರವಾಗಿ ಗಂಡನ ಹಾಸುಗೆಗೆ ಹೋಗಿ ಮೈಚಾಚುವಳು.

ಅವಳ ಈ ನಡವಳಿಕೆಗಳನ್ನು ಕಂಡ ಅವಳ ಗಂಡನು ಅವಳಲ್ಲಿ ವಿಶ್ವಾಸವನ್ನು ತಾಳಿ ಒಂದು ರಾತ್ರಿ ; "ನಿಜ ಹೇಳು, ನಿನ್ನ ತವರಿನವರ ಮೇಲೆ ಆಣೆಯಿಟ್ಟು ಹೇಳು" ಎಂದು ಕೇಳಿದ.

ಅವಳು ನಡುವೆಯೇ : "ನಾನು ತಡವಾಗಿ ನನ್ನ ತವರಿಗೆ ಹೋಗಿದ್ದೀನಾ ?" ಎಂದು ಕೇಳಿದಳು.

"ಆಮೇಲೆ...." ಅವನು ತನ್ನ ಮೇಲೆಯೇ ಆಣೆಯಿಟ್ಟು ಹೇಳು ಎಂದು ಕೇಳಲು ಹೋದ. ಆದರೆ ಅವನ ನಂಬಿಕೆ ಆ ಮಟ್ಟಕ್ಕೆ ಹೋಗಿರಲಿಲ್ಲ. "ನಿನಗೆ ಯಾರ ಮೇಲೆ ಇಷ್ಟವೋ ಅವರ ಮೇಲೆ ಆಣೆಯಿಟ್ಟು ಹೇಳು" ಎಂದ.

"ನಾನ್ಯಾಕೆ ಆಣೆಯಿಡಬೇಕು ?"

ಅವನಿಗೆ ಅವಳ ಮೊದಲ ಪ್ರಶ್ನೆಗಿಂತ ಎರಡನೆಯದೇ ಮುಖ್ಯವಾಗಿತ್ತು. "ಆಯ್ತು, ಮೊದಲು ಯಾರ ಮೇಲೆ ಆಣೆಯಿಟ್ಟು ಹೇಳ್ತಿಯಾ ಹೇಳು ? ನಿನಗೆ ಯಾರು ತುಂಬಾ ಇಷ್ಟ ?" ಎಂದು ಕೇಳಿದ.

ಈ ವೇಳೆಗಾಗಲೇ ಅವಳು ತುಂಬು ಹೃದಯದಿಂದ ವರ್ತಿಸತೊಡಗಿದ್ದಳು. ನಿಜವಾಗಿ, ಅವಳೂ ಕೂಡ ತಾನು ಅಭಿನಯಿಸುತ್ತಿದ್ದೇನೆ ಎನ್ನುವುದನ್ನೇ ಮರೆತಿದ್ದಳು. "ನಾನು ನನ್ನ ಅಪ್ಪನಿಗಿಂತ ಅಮ್ಮನನ್ನು ಹೆಚ್ಚು ಪ್ರೀತಿಸ್ತೀನಿ, ನನ್ನ ಅಮ್ಮನಿಗಿಂತ ಅತ್ತೆಯನ್ನು ಹೆಚ್ಚಾಗಿ ಪ್ರೀತಿಸ್ತೀನಿ, ಅತ್ತೆಗಿಂತ ಮಿಗಿಲಾಗಿ ನನ್ನ ಗಂಡನನ್ನು ಪ್ರೀತಿಸ್ತೀನಿ" ಎಂದಳು.

ಪಾಪ ! "ನನಗೆಲ್ಲಾ ಗೊತ್ತಿರೋ ಹಾಗೆ, ಇವಳು ನನ್ನನ್ನು ಮರುಳು ಮಾಡ್ತಿದ್ದಾಳೆ" ಎಂಬ ಸಂಶಯವನ್ನಿನ್ನೂ ಅವನು ಇಟ್ಟುಕೊಂಡಿದ್ದ.

ನಿಜವಾಗಿ, ಅವನು ಹೇಗೆ ತಾನೆ "ತಾನೀಗ ತಿರುಕನ ಬದಲಾಗಿ ರಾಜನಾಗಿ ತನ್ನ ಹೆಂಡತಿಯ ಹೃದಯ ಸಿಂಹಾಸನವನ್ನು ಅಲಂಕರಿಸಿದ್ದೇನೆ" ಎಂದು ನಂಬಲು ಸಾಧ್ಯ ?

"ನೋಡು ನನ್ನನ್ನು ನೀನು ಮರುಳು ಮಾಡುವುದಕ್ಕೆ ಆಗುವುದಿಲ್ಲ, ಹೇಳು, ಈ ಕೊಳಲನ್ನು ತರಲು ಏನು ಕಾರಣ ?" ಎಂದು, ತಾನು ಅವಳಿಗೆ ಎಚ್ಚರಿಕೆ ಕೊಡುತ್ತಿದ್ದೇನೆಯೋ ಅಥವಾ ಅವಳೊಂದಿಗೆ ವಾದಿಸುತ್ತಿದ್ದೇನೆಯೋ ಎಂಬುದನ್ನು ಅರಿಯದೆ ಕೇಳಿದ.

ಅವಳು "ಏನು ಹಾಗೆಂದರೆ ?" ಎಂದು ತಬ್ಬಿಬ್ಬಾಗಿ ತಗ್ಗಿದ ಧ್ವನಿಯಲ್ಲಿ ಕೇಳಿದಳು. ತಕ್ಷಣ ತನ್ನ ಮನಸ್ಸನ್ನೂ ರಭಸವಾಗಿ ಐದು ತಿಂಗಳ ಹಿಂದಕ್ಕೆ ತಳ್ಳಿ ಅವಳು ಹೇಗೆ ಆ ಫೋಟ್ರಾಜಿಯ ಅಂಗಡಿಗೆ ಹೋಗಿ, ಒಂದು ಕಡ್ಡಿಗೆ ಒರಗಿ ಕುಳಿತು ಕೈಯಲ್ಲಿ ಕೊಳಲನು ಹಿಡಿದಿರುವ ಚಿತ್ರವನ್ನು ನೋಡಿ, ಕೊಳಲನ್ನು ಕೊಳ್ಳಲು ನಿರ್ಧರಿಸಿದಳು

ಎಂಬೀ ಘಟನೆಗಳನ್ನು ನೆನಪಿಸಿಕೊಂಡಳು. "ನಾನು ಅದನ್ನು ಹೇಗೆ ತಂದೆ ಅಂತ, ನೀನು ತಿಳ್ಕೊಂಡೆ ? ಜಾತ್ರೆಯಲ್ಲಿ ಯಾರೋ ಇದೇ ತರಹದ ಕೊಳಲನ್ನು ಹಿಡಿದಿದ್ದನ್ನು ನೋಡಿದ್ದೆ" ಎಂದಳು.

"ನೀನೂ ಸಹ ನೋಡಿರಬಹುದು, ನಮ್ಮೂರಲ್ಲೂ ಇದೇ ತರಹದ ಕೊಳಲನ್ನು ಕೆಲವರು ಇಟ್ಕೊಂಡಿದ್ದಾರೆ. ಆದರೆ ನೀನಿದನ್ನು ತರಲು ಏನು ಕಾರಣ ?"

ಅವಳು ತನ್ನ ಗಂಡನ ವಿಶ್ವಾಸವನ್ನು ಗಳಿಸಿಕೊಳ್ಳಲು ಆ ವ್ಯಕ್ತಿ ಹೇಳಿದ್ದು, ಅದರಿಂದ ಅವಳು ಆ ಕೊಳಲನ್ನು ಹಾಗೂ ಇತರೆ ವಸ್ತುಗಳನ್ನು ಕೊಂಡುತಂದದ್ದನ್ನು ಹೇಗೆ ತಾನೇ ಹೇಳಲಾದೀತು ?

"ಯಾಕೆಂತ ಆ ದೇವರೊಬ್ಬನಿಗೇ ಗೊತ್ತು. ಆದರೆ ಬಹಳ ಕಾಲದಿಂದ ನಾನ. ಜನರೊಂದಿಗೆ ಜಗಳ ಮಾಡ್ತಿದ್ದೆ. ನಾನು ಅವರ ಮನಸ್ಸನ್ನು ಮೀರಿ ನಡೆದುಕೊಳ್ಳಲು ಕಾಲ ಹಾಗಿತ್ತು" ಎಂದಳು.

"ಹಾಗಿದ್ದ ಮೇಲೆ, ನಾನೂ ನಿನ್ನ ಮನಸ್ಸನ್ನು ಗೆಲ್ತೀನಿ",

"ನೀನಾಗಲೇ ಅದನ್ನು ಮಾಡಿದ್ದೀಯಾ",

"ಇಲ್ಲ, ಈ ಕೊಳಲಿನಿಂದ ನೀನು ಹೇಗೆ ನನ್ನ ಮನಸ್ಸನ್ನು ಗೆದ್ದೆಯೋ. ಹಾಗೆಯೇ ನಾನೂ...." "ನೋಡ್ತಾ ಇರು. ನಾನು ನಿನಗೇನನ್ನು ತರ್ತೀನಿ ಅಂತ" ಎಂದು

ಅವಳು "ಏನು ತರ್ತೀಯಾ ?" ಎಂದು ಎರಡು ಮೂರು ಸಲ ಎಂದಿನಂತೆ ಕೇಳುವ ಧಾಟಿಯಲ್ಲಿ ಕೇಳಿದಳು.

ಏಕೋ ಅವನ ಆನಂದ ಹಾಗೂ ಪ್ರೀತಿಯ ಮಾತುಗಳು ಅವಳನ್ನು ಮುದಗೊಳಿಸುವುದರ ಬದಲಾಗಿ ಇನ್ನೂ ಹೆಚ್ಚಿನ ಇಕ್ಕಟ್ಟಿಗೆ ಸಿಕ್ಕಿಸಿದ್ದವು.

ಅವನು ಪೇಟೆಯಿಂದ ವಾಪಸ್ಸು ಬರುವಾಗ ತನ್ನ ಹೆಂಡತಿಗೆಂದು ಏನಿಲ್ಲದಿದ್ದರೂ ಒಂದು ಕುಪ್ಪಸವನ್ನು ತಂದುಕೊಡಲು ಅವಳು .

ಅವಸರವಸರವಾಗಿ ಊಟವನ್ನು ಮುಗಿಸಿ ಮುಂದಿನ ರೂಮಿನ ಬಾಗಿಲನ್ನು ಹಾಕಿ ಅದನ್ನು ತೊಟ್ಟುಕೊಳ್ಳಲು ಪ್ರಯತ್ನಿಸಿದಳು.

ಆ ಕುಪ್ಪಸದ ಮೇಲೆ ಎರಡು ಹಕ್ಕಿಗಳು ತಮ್ಮ ಕೊಕ್ಕುಗಳಿಂದ ಪರಸ್ಪರ ಆಟವಾಡುತ್ತಿರುವ ಕಸೂತಿಯನ್ನು ಬಿಡಿಸಿದ್ದುದನ್ನು ನೋಡುತ್ತಾ "ನಿನ್ನ ತಾಯಾಣೆಯಾಗಿ ಹೇಳು, ಸುಳ್ಳು ಹೇಳಬೇಡ....ಇದನ್ನು ಎಲ್ಲಿಂದ ತಂದೆ...." ಎಂದು ಅವನಿಗೆ ಕೇಳಲಾಗದೆ ಕೇಳಿದಳು.

ಅವನು "ಆ ವಿಷಯದಲ್ಲಿ ನಾನು ಸುಳ್ಳು ಹೇಳಬೇಕಾಗ್ತದೆ. ಆ ಮುದುಕಿ ಸಾಯುವ ಸ್ಥಿತಿಯಲ್ಲಿದ್ದಾಳೆ" ಎಂದ.

"ನನ್ನ ಮೇಲೆ ಆಣೆಯಿಟ್ಟು ಹೇಳು...." ಎಂದು ಮತ್ತೊಮ್ಮೆ ನಿಸ್ಸಹಾಯಕಳಾಗಿ ಕೇಳಿದಳು.

ಅದು ಅವಳ ಗಂಡನ ನಿರೀಕ್ಷೆಗಿಂತಲೂ ಮಿಗಿಲಾಗಿತ್ತು. ಅವನು ಹೇಗೆ ಊರಿನವರಿಂದ ಬೇರೆಯಾಗಿ ಅಂಗಡಿಗೆ ಹೋಗಿ ತನ್ನ ಹೆಂಡತಿಗೆಂದು ಏನನ್ನು ಕೊಳ್ಳುವುದು

ಎಂದು ಅಲೆದಾಡಿದ್ದು ; ಒಂದು ಅಂಗಡಿಯಲ್ಲಿ ಅಂಗಡಿಯವನು : "ನಿನ್ನ ಹೆಂಡತಿಯನ್ನು ನೀನು ಒಲಿಸಿಕೊಳ್ಳಬೇಕಾದರೆ ಈ ಕುಪ್ಪಸವನ್ನು-ಬೆಲೆ ಜಾಸ್ತಿಯಾದರೂ ಪರವಾಗಿಲ್ಲ-ತಗೊಂಡು ಹೋಗಿ ನಿನ್ನವಳಿಗೆ ಕೊಡು. ಈಗ ತಾನೇ ಯಾರೋ ಒಬ್ಬ ರಸಿಕ ಇಂಥದ್ದೊಂದನ್ನು ತಗೊಂಡು ಹೋದ : ಈಗ ಉಳಿದಿರೋದು ಇದೊಂದೆ ;" ಎಂದು ತನ್ನ ಸಮಸ್ಯೆಯನ್ನು ಪರಿಹರಿಸಿದ್ದು ಇವೆಲ್ಲವನ್ನೂ ಅವಳಿಗೆ ವಿವರಿಸಿದ.

ಪಾಪ, ಅವಳು ಹೇಗೆ ತಾನೆ ಊಹಿಸಬೇಕು....

ಅವಳು ಅಂಬ್ಲಿ ಜಾತ್ರೆಗೆ ಹೋದಾಗಲೇ ಆ ಯುವಕನ ಜೊತೆಯಲ್ಲಿ ಹೋಗಲು ನಿರಾಕರಿಸಿದಾಗ ತಿಳಿದಿದ್ದೆಂದರೆ....

ಬೇಸರದಿಂದ ತನ್ನ ತಲೆಯನ್ನು ಹಿಡಿದುಕೊಂಡು ಅವನು ಕೂಗಿ ಹೇಳಿದ : "ಹುಚ್ಚಳಾಗಬೇಡ, ನಿನಗೆ ಪ್ರಿಯವಾದ ಬಟ್ಟೆಗಳನ್ನು ನಾನು ತಗೊಂಡಿದ್ದೀನಿ...."

ಬೇರೊಬ್ಬ ರಸಿಕ ಆ ಕುಪ್ಪಸವನ್ನು ತೆಗೆದುಕೊಂಡು ಹೋದ ಎಂಬ ಮಾತನ್ನು ಕೇಳಿದ ಮೇಲೆ ಅವಳು ಇನ್ಯಾರೋ ಅಲ್ಲದೆ, ಅವನೇ ಇರಬೇಕೆಂದು ಊಹಿಸಿದಳು. ಆದರೆ ಅವನನ್ನು ಕೇಳುವುದಕ್ಕೆ ಮನಸ್ಸಾಗಲಿಲ್ಲ. ಅವಳು ಕಂಬನಿದುಂಬಿದ ಕಣ್ಣುಗಳೊಂದಿಗೆ "ನನಗೀಗ ಆ ಮನೆಯನ್ನು ಬಿಟ್ಟಿರಲು ಆಗ್ತಾ ಇಲ್ಲ. ಏನಾದರೂ ಆಗಲಿ, ನನ್ನನ್ನು ನಂಬಿದ ನನ್ನ ಗಂಡನಿಗೆ ನಾನು ದ್ರೋಹ ಬಗೆಯಲಾರೆ ನಿನಗೆ ನನ್ನ ಮೇಲೆ ಅಷ್ಟೊಂದು ಆಸಕ್ತಿಯಿದ್ದರೆ ನನ್ನನ್ನು ಪ್ರಚೋದಿಸಬೇಡ" ಎಂದು ಹೇಳಿ ಆ ಕಡೆಗೆ ತಿರುಗಿದಳು.

ಕೋಪಗೊಂಡ ಅವನು ಅವಳನ್ನು ಅಡ್ಡಗಟ್ಟಿ ಹೇಳಿದ : "ನೋಡು ನಿನಗೇನು ಗೊತ್ತು ? ನಿನಗೋಸ್ಕರ ನನ್ನ ಸಂಬಂಧಿಯ ಮನೆಗೆ ಹೋಗಿ ನನ್ನ ಹೆಂಡತಿಯನ್ನು ಅವಳ ಮನೆಗೆ ಬಿಟ್ಟು ಬಂದೆ. ಈಗ..."

ಅದಕ್ಕವಳು ಅವನ ಕಡೆ ಅಗಲಿಸಿದ ಬಾಯಿಂದ ನೋಡಿದಳು-ಅದು ಮೌನದ ಕಿರುಚಾಟದಂತಿತ್ತು. ಅವಳ ಕಂಬನಿ ತುಂಬಿದ ಕಣ್ಣುಗಳು ಸಹರಾ ಮರುಭೂಮಿಯಂತಾಗಿದ್ದವು.

ತನ್ನ ಎಂದಿನ ಸ್ಥಿತಿಗೆ ಮರಳಿ ಅವನ ಕಡೆ ನೋಡಿದಾಗ ಅವನು ನಿರ್ಜೀವನಂತೆ ತೋರಿದ. ಅವನನ್ನು ಕ್ಷಮೆಯಾಚಿಸುವ ರೀತಿಯಲ್ಲಿ ಅವಳು "ನಾನೇನು ಮಾಡಿದೆನೋ ಹಾಗೆ ನೀನೂ ಮಾಡು, ನಿನ್ನ ಹೆಂಡತಿಯ ಮುಂದೆ ನಿನ್ನೆಲ್ಲಾ ಸ್ವಾಭಿಮಾನವನ್ನು ನುಂಗಿಕೊಂಡು ಅವಳನ್ನು ವಾಪಸ್ಸು ಕರೆದುಕೊಂಡು ಬಾ. ನೀನು ಹೇಳಿದಂತೆ ನಾನು ಮಾಡಿದೆ....ಹೀಗಾಯ್ತು, ನಾನೇನು ಮಾಡಲಿ ?" ಎಂದು ಒಂದೇ ಸಮನೆ ಒಡಬಡಿಸಿದಳು. ನಿದ್ರೆಯಿಂದ ಎಚ್ಚೆತ್ತವಳಂತೆ ಅಲ್ಲಿಂದ ಹೊರಟಳು. ಧಾರೆಯಾಗಿ ಸುರಿಯುತ್ತಿರುವ ಕಣ್ಣೀರನ್ನು ತನ್ನ ಸೆರಗಿನಿಂದ ಒರಸಿಕೊಂಡು ತಗ್ಗಿದ ಧ್ವನಿಯಲ್ಲಿ "ಹೋಗು, ಅವಳನ್ನು ವಾಪಸು ಕರೆದುಕೊಂಡು ಬಾ, ನಾನು ಏನು ಮಾಡಿದೆ ಅದನ್ನು ನೀನೂ ಮಾಡು, ಸಾವಿರ ಸಮಸ್ಯೆಗಳಿಗೆಲ್ಲಾ ಅದೊಂದೇ ಪರಿಹಾರ !" ಎಂದು ಹೊರಟು ಹೋದಳು.

# ಹಿಂದಿ ಕಾವ್ಯದಲ್ಲಿ ದಲಿತ ಚೇತನ

ಡಾ॥ ಟಿ. ಜಿ. ಪ್ರಭಾಶಂಕರ್ 'ಪ್ರೇಮಿ

ವರ್ಣಾಶ್ರಮದ ವ್ಯವಸ್ಥೆಯಿಂದಾಗಿ ಪ್ರಾರಂಭವಾದ 'ದಲಿತ' ಶೋಷಣೆ ಇಂದಿಗೂ ನಡೆಯುತ್ತಲೇ ಬಂದಿದೆ. ಆಧುನಿಕ ಸಾಹಿತ್ಯ ಸುಧಾರಣೆಯ ಕಾಲದ, ಸಾಮಾಜಿಕ ಪರಿವರ್ತನೆಯ ಕಾಲದ ಸಾಹಿತ್ಯವಾದ್ದರಿಂದ 'ದಲಿತ'ರ ದುಃಸ್ಥಿತಿಯ ವರ್ಣನೆ, ಅವರ ಬಗ್ಗೆ ಅನುಕಂಪ ಮುಂತಾದ ಭಾವನೆಗಳ ಕಡೆ ಗಮನ ಹರಿಸಿದೆ.

ದಲಿತರನ್ನು ಕುರಿತಾದ ಸಾಹಿತ್ಯ ಕನ್ನಡದಂತೆಯೇ ಹಿಂದಿಯಲ್ಲಿಯೂ ಮಧ್ಯ ಯುಗದಲ್ಲಿ ಕಾಣಬಹುದು. ಹಿಂದಿ ಸಂತ ಕವಿಗಳಲ್ಲಿ ರೈದಾಸ, ದಾದೂ ದಯಾಲ್ ಮೊದಲಾದವರು ದಲಿತ ವರ್ಗದಿಂದ ಬಂದವರೇ.

ಕನ್ನಡದಲ್ಲಿ ದಲಿತ ಆಂದೋಲನ ನಡೆದಂತೆ ಹಿಂದಿಯಲ್ಲಿ ಸಮಾಂತರ ಸಾಹಿತ್ಯ ಆಂದೋಲನ ಪ್ರಾರಂಭವಾಯಿತು. ಆದರೆ ಹಿಂದಿ ಕವಿಗಳಲ್ಲಿ 'ದಲಿತ'ರ ಚಿತ್ರಣ ಕಾಣಬಹುದಾದರೂ ಅವರನ್ನು ದಲಿತ ಕವಿಗಳೆನ್ನಲಾಗುವುದಿಲ್ಲ. ಏಕೆಂದರೆ ಕನ್ನಡ ಸಾಹಿತ್ಯದಲ್ಲಿ 'ದಲಿತ ಕವಿ'ಗಳೆಂದರೆ ದಲಿತ ವರ್ಗದಿಂದ ಬಂದ ಕವಿಗಳೆಂದೇ ಅರ್ಥ.

ಆಧುನಿಕ ಹಿಂದಿ ಸಾಹಿತ್ಯದ ಪ್ರಾರಂಭದಿಂದಲೂ ದಲಿತ ವರ್ಗದ ಬಗ್ಗೆ ಅನುಕಂಪವನ್ನು ಗುರುತಿಸಬಹುದು. 'ಹರಿ ಔದ್'ರವರು ಸ್ವಾತಂತ್ರ್ಯಪೂರ್ವದಲ್ಲಿಯೇ ತಮ್ಮ 'ಅಛೂತೆಪದ್'ನಲ್ಲಿ ಹೇಳುತ್ತಾರೆ – ನಮಗೆ ಅಸ್ಪೃಶ್ಯರ ಶ್ರಮ ಬೇಕು ಆದರೆ ಅವರನ್ನು ಮುಟ್ಟಲೇಕೆ ಭಯ ?

ಅವರ ಮುಟ್ಟಲೇಕೆ ಭಯ
ಅವರ ಜೀವರಿನಿಂದ ಹೊಲ ತೂಗಿ ತೊನೆವುದು
ಅವರ ಕಂಗಳಿಂದ ಅಮೃತದಂತಹ ರಸಧಾರೆ

ಅಷ್ಟೇ ಅಲ್ಲ
ಕಲ್ಲ ಮುಟ್ಟುವೆವು ಧೂಳ ಮುಟ್ಟುವೆವು
ಅವರನ್ನೇಕೆ ಮುಟ್ಟಲೊಲ್ಲೆವು
ಅವರ ಮುಟ್ಟುವುದಿಲ್ಲ
ಆದರೆ ಕೊಟ್ಟ ಮೆಟ್ಟ ಮುಟ್ಟುವೆವಲ್ಲ

'ದಿನಕರ್'ರವರ 'ರಶ್ಮಿಕಥಿ' ಕಾವ್ಯದಲ್ಲಿ ಜಾತಿವಾದ ಮತ್ತು ಸಾಮಾಜಿಕ ಅಸಮಾನತೆಯನ್ನು ತೀವ್ರವಾಗಿ ವಿರೋಧಿಸಿದ್ದಾರೆ. ಸೂತಪುತ್ರನೆಂದು ಹೀಯಾಳಿಸಲ್ಪಟ್ಟ ಕರ್ಣ ಹೇಳುತ್ತಾನೆ :

ಜಾತಿ ಜಾತಿ ಎಂದೊರಲುವರು ಪಾಖಂಡದ ಬಲದಿಂದ
ಜಾತಿ ಎಂದರೇನೆಂದು ತಿಳಿಯೆ, ನೋಡಿ ನನ್ನ ಭುಜಬಲವ

ಮೈಥಿಲಿ ಶರಣಗುಪ್ತರು 'ಅಛೂತೋಂಕಾ ಉದ್ಧಾರ್' ಕವಿತೆಯಲ್ಲಿ ಹೇಳುತ್ತಾರೆ. ಅಸ್ಪೃಶ್ಯರನ್ನು ನಾಯಿ, ಬೆಕ್ಕುಗಳಿಗಿಂತಲೂ ಕಡೆಗಣಿಸಲಾಗಿದೆ.

ನಾಯಿ-ಬೆಕ್ಕುಗಳಿಗಿಂತಲೂ ದೂರ
ತಮ್ಮವರನ್ನಿಟ್ಟ ಜನ ಕ್ರೂರಿಗಳು
ಅವರನು ಬೇರೆಯವರು ತಿಳಿದರೆ
ಅಸಭ್ಯ, ಕ್ರೂರಿಗಳೆಂದು ಏನಾಶ್ಚರ್ಯ.

ಬಾಲಕೃಷ್ಣ ಶರ್ಮಾ 'ನವೀನ'ರವರು 'ಎಂಜಲೆಲೆ' (ಜೂಟಿ ಪತ್ತೆ) ತಿನ್ನುವ ಭಿಕಾರಿಗಳನ್ನು ನೋಡಿ ಹೇಳುತ್ತಾರೆ :

ಮನುಷ್ಯನು ಮನುಷ್ಯನ ಮುಂದೆ ಕೈಚಾಚುವುದು ಕಂಡಿದ್ದೀಯು?
ಅವನ ಕಂಗಳಿಂದಿಳಿವ ಅಶ್ರುಧಾರೆಯನ್ನು ಗುರುತಿಸಿದ್ದೀಯು ?
ನೋಡಿದ್ದೀಯು ? ಆದರೆ ಹೇಳುವೆ ನಾನಲ್ಲ ವಿಪ್ಲವಕಾರಿ ?
ಹಾಗಾದರೆ ನೀ ನಪುಂಸಕ ಅಥವಾ ಮಹಾಭಯಂಕರ ಅತ್ಯಾಚಾರಿ !

ಶಿವಮಂಗಲ ಸಿಂಹ 'ಸುಮನ್'ರವರು ದಲಿತ ಮಾನವನ ಸ್ಥಿತಿಯನ್ನು ಹೀಗೆ ಚಿತ್ರಿಸುತ್ತಾರೆ :

ನಾನು ಜೀವನದ ಹಾದಿಯಲಿ
ಮೂಕ-ವ್ಯಥೆಗಳ ಮನೆ
ನಾನು ಹಾದಿಯ ಕಲ್ಲು-ಚೂರು.

ಕವಿ ಬದಲಾಗುತ್ತಿರುವ ಯುಗದಲ್ಲಿ ದೀನ-ಹೀನ ಮನುಷ್ಯನ ಯಥಾರ್ಥ ಸ್ಥಿತಿಯನ್ನು ಹೊಸ ಹೊಸ ಕಾವ್ಯ ಪ್ರಯೋಗಗಳ ಮೂಲಕ ಚಿತ್ರಿಸುವ ಪ್ರಯತ್ನ ಮಾಡಿದ್ದಾನೆ. ಈ ದಿಶೆಯಲ್ಲಿ 'ಲಘು ಮಾನವನ ಕಲ್ಪನೆ'ಯೂ ಮಹತ್ವಪೂರ್ಣವಾದದ್ದು. ದಲಿತ ವರ್ಗವೂ ಈ 'ಲಘು ಮಾನವ'ನೊಳಗೆ ತನ್ನ ಅಸ್ತಿತ್ವವನ್ನು

ಕಾಡುಕೊಳ್ಳುತ್ತದೆ. ತನ್ನ ಕುಬ್ಜತನಕ್ಕೆ ಹೆದರದಿರೆಂದು ಲಘುಮಾನವನಿಗೆ 'ಅಜ್ಞೇಯ' ರವರು ಧೈರ್ಯ ತುಂಬಿ ಹೇಳುತ್ತಾರೆ –

ಪ್ರತಿಯೊಬ್ಬ ಮನುಷ್ಯನೂ ಕುಬ್ಜನೆ ಆದರೆ
ನಾನು ಇಬ್ಬರಲ್ಲೂ ಕುಬ್ಜನಾಗೆ ಇರುತ್ತೇನೆ
ಸೋಲಬೇಡ. ಸಾಹಸ ಬಿಡಬೇಡ.
ಇದಕ್ಕಿಂತಲೂ ಆಳವಾದ ಶೂನ್ಯದಲ್ಲಿ
ಮೂರು ಹೆಜ್ಜೆಗಳಲ್ಲಿ ಕುಬ್ಜನೇ ಭೂಮಿಯನ್ನಳೆದ.

('ಹರೀ ಘಾಸ್‌ಪರ್ ಕ್ಷಣಭರ್')

ಪ್ರಯೋಗವಾದಿ ಕವಿಗಳು ದಲಿತ ವರ್ಗದವರ ದೌರ್ಬಲ್ಯ ಮತ್ತು ಶಕ್ತಿ ಎರಡನ್ನೂ ಗುರುತಿಸಿದರು. ಅಷ್ಟೇ ಅಲ್ಲ, ಈಶ್ವರನ ಸ್ಥಾನದಲ್ಲಿ ಉಪೇಕ್ಷಿತ ದಲಿತ ಮಾನವನನ್ನು ಪ್ರತಿಷ್ಠಿಸಿದರು. ದೇಶ ಸ್ವತಂತ್ರವಾದರೂ 'ದಲಿತ' ಹಾಗೇ ಉಳಿದ. ಅಧಿಕಾರ ಬಂದ ಮೇಲೆ ದೇಶಸೇವಕರ ವರ್ತನೆ ಬದಲಾಯಿತು. ಆದರಿಂದಾಗಿ ಶೋಷಣೆ, ಅನ್ಯಾಯ ಹೆಚ್ಚಿದವು. ದಲಿತ ಅಸಹಾಯಕನಾದ. ಗಿರಿಜಾಕುಮಾರ ಮಾಥುರ್‌ರವರು ಹೇಳುವಂತೆ – ಹೊಸ ಕವಿಯು ಕೇಂದ್ರ ಶತಮಾನಗಳಿಂದ ಅನ್ಯಾಯದ ಧೂಳಿನಲ್ಲಿ ಬಿದ್ದವ. ಅವನ ಅಶೋಚ್ಛ್ವಾಸಗಳಿಗೆ ಆತ್ಮೀಯ ಮರ್ಮ-ಸ್ಪಂದನಗಳಿಗೆ ಬೆಲೆಯಿರಲಿಲ್ಲ. ಇಂದು ಈ ಮನುಷ್ಯನ ಶಕ್ತಿ ಸಾಮರ್ಥ್ಯಗಳನ್ನು ಗುರುತಿಸುವ ಪ್ರಯತ್ನ ನಡೆಯುತ್ತಿದೆ.

ದಲಿತರನ್ನು ಕಡೆಗಣಿಸುವುದು ಕೇವಲ ನಮ್ಮ ದೇಶಕ್ಕೇ ಸೀಮಿತವಲ್ಲ. ದಕ್ಷಿಣ ಆಫ್ರಿಕಾದಲ್ಲಿ ಇದರ ಭಯಂಕರ ರೂಪವನ್ನು ನೋಡಬಹುದು. ನರೇಶ್ ಮೆಹತಾ ಹೇಳುತ್ತಾರೆ –

'ಈ ದಕ್ಷಿಣ ಆಫ್ರಿಕೆಯಲಿ
ಬಿಳಿ-ಕರಿಯರ ಕದನ ನಡೆದಿದೆ
ಮನುಜ ಮನುಜರ ದ್ವೇಷಾಗ್ನಿ ಉರಿಯುತಿದೆ
ಮತ್ತು ಜ್ವಲಿಸುತ್ತಿದೆ
ಜೀವನದ ಸುಖವು'
ಮೌಲ್ಯಗಳು ಅರ್ಥಹೀನವಾಗಿವೆ.

ಇಂದು ಎಲ್ಲೆಲ್ಲೂ ಅಪಮಾನ, ಅತ್ಯಾಚಾರಗಳು. ಗಿರಿಜಾಕುಮಾರ್ ಮಾಥುರ್ ಹೇಳುತ್ತಾರೆ –

ಬದುಕಿನ ಮೇಲೆ ಬಿಚ್ಚುಗತ್ತಿ
ದೈನ್ಯ, ದುಃಖ, ಅನ್ಯಾಯ, ಅತ್ಯಾಚಾರಗಳು
ಮನುಷ್ಯ ಮನುಷ್ಯನ ಮೇಲೆ ಮಾಡುತ್ತಿದ್ದಾನೆ ಪ್ರಹಾರ
ವಿಶ್ವದ ನೈತಿಕತೆ ಪತನದ ಮಹಾದ್ವಾರದಲ್ಲಿದೆ.

ಈ ಅಪಮಾನಿತ ದಲಿತರನ್ನು ಕುರಿತು ಧರ್ಮವೀರ ಭಾರತಿ ಹೇಳುತ್ತಾರೆ. ಈ ಅತ್ಯಾಚಾರ, ಅಪಮಾನಗಳಿಂದ ಮುಕ್ತರಾಗಬೇಕಾದರೆ ಸ್ವಾವಲಂಬಿಗಳಾಗಿ ಮುಂದು ವರಿಯುವುದೊಂದೇ ಮಾರ್ಗ. ಯಾವುದೇ ದಳ, ಸಂಪ್ರದಾಯಗಳ ಹಿಂದೆ ಬೀಳದೆ ತಮ್ಮ ಕಾಲ ಮೇಲೆ ತಾವೇ ನಿಲ್ಲಬೇಕು. ಭಾರತಿಯವರ ಶಬ್ದಗಳಲ್ಲೇ ಕೇಳಿ –

ನಾವೇ ನಡೆಯಬೇಕು
ನಡೆಯುವುದರಿಂದಲೇ ತುಳಿಯಲ್ಪಟ್ಟ ಅಪೂರ್ಣರಾದ ನಮ್ಮ
ಹೊಸ ಸಂಘಟನೆ ಸಾಧ್ಯ.
ನಮಗೆ ನಮ್ಮ ಜರ್ಝರ ಆದರೆ ಅರಾಜೇಯ ಚರಣ
ಆಶ್ರಯ ಕೊಡುವುದು.

ಶೋಷಣೆಯ ಮೂಲ ಅಸಮಾನತೆ. ಈ ಬೆಳೆ ಬೀಜದಂತೆಯೇ - ಧರ್ಮವೀರ ಭಾರತಿ ಹೇಳುತ್ತಾರೆ –

ಈ ಬೆಳೆಯ ಕತ್ತರಿಸು....
ಹಿಂದಿನ ಕಾಲದಲ್ಲಿ
ವಿಷಮತೆಯ ಬೀಜ ಬಿತ್ತಿದ್ದೆವು
ಇಂದು ಅದೇ ವಿಷಪೂರಿತ ಹಾವಿನ ಹೊಲ ಬೆಳೆದು ನಿಂತಿದೆ.

ಶೋಷಣೆಯಿಂದ ನೊಂದವರನ್ನು ಕುರಿತು ಪ್ರಭಾಕರ ಮಾಚತಿ 'ನಿಮ್ನ-ಮಧ್ಯ ವರ್ಗ' ಕವಿತೆಯಲ್ಲಿ ಹೇಳುತ್ತಾರೆ -

'ಬೀಸುತ್ತಾ ಬೀಸುತ್ತಾ
ಸ್ವತಃ ನಾನೇ ನುಣ್ಣನೆ ಹಿಟ್ಟಾಗುತ್ತಿದ್ದೇನೆ.'

ಎಷ್ಟೇ ಅಭಾವಗಳು ಬಂದರೂ ಉಳ್ಳವರ ಬಲೆಗೆ ಬಿದ್ದು ಆತ್ಮಗೌರವ ಕಳೆದು ಕೊಳ್ಳದಿರಲು ದಲಿತರಿಗೆ ಸಂದೇಶ ನೀಡುತ್ತಾರೆ ಧರ್ಮವೀರ ಭಾರತಿ —

'ಚೆಕ್ ಬುಕ್ಕು ಹಳದಿಯದಿರಲಿ ಕೆಂಪದಿರಲಿ,
ನಾಣ್ಯವಿರಲಿ ಪ್ರಸಿದ್ಧಿಯಿರಲಿ
ಕೊಳ್ಳಬಂದವರಿಗೆ ಹೇಳು
ಹಸಿದವರೆಲ್ಲಾ ಬಿಕರಿಯ ವಸ್ತುಗಳಲ್ಲ.'

ಈ ದಲಿತರ ದುಸ್ಥಿತಿ ಒಂದು ದಿನ ಏಕಲವ್ಯರಿಗೆ ಜನ್ಮ ನೀಡೇ ತೀರುತ್ತದೆ. 'ಅಜ್ಞೇಯ'ರವರು ಹೇಳುತ್ತಾರೆ —

ಅಸಂಖ್ಯ ಗುಡಿಸಲುಗಳಿಂದ ಅಸಂಖ್ಯ ಏಕಲವ್ಯರು
ತಲೆ ಎತ್ತುತ್ತಾರೆ ಬಿಲ್ಲು ಎದೆಗೇರಿಸಿ ಬಾಣ ಬಿಡುತ್ತಾರೆ
o o o
ಆತ್ಮ ಇಲ್ಲವೇ ಇಲ್ಲ ಬಿಲ್ಲು ನಮಗೆ ಕೊಡಿ
ದಿಕ್ ಬೋಧ ನಾವು ಅಳಿಸುತ್ತೇವೆ, ದಿಗ್ವಿಜಯ ನೀವು ಮಾಡಿ.

ಪ್ರಯೋಗವಾದದಂತೆಯೇ 'ದಲಿತ'ರ ಚಿತ್ರಣ 'ನಯೀ ಕವಿತೆ'ಯಲ್ಲಿಯೂ ಮೂಡಿಬಂದಿದೆ. ನಯೀ ಕವಿತೆಯಲ್ಲಿ ಸಾಮಾಜಿಕ ಚೇತನೆಯ ಚಿತ್ರಣ ಆಳವಾದ ಅನುಭೂತಿಯೊಂದಿಗೆ ನಡೆದಿದೆ. ಈ ಕವಿತೆಗಳಲ್ಲಿನ ದಲಿತ ವರ್ಗದ ಚಿತ್ರಣದಲ್ಲಿ ಹೆಚ್ಚು ಪ್ರಾಮಾಣಿಕತೆಯನ್ನು ಕಾಣಬಹುದು. 1950 ರಿಂದ 1960ರ ವರೆಗೆ ಪ್ರಯೋಗವಾದದಿಂದ ಹೊರಬರುವ ಪ್ರಯತ್ನ ಮಾಡುತ್ತ, 'ನಯೀ ಕವಿತೆ' 1960 ರಲ್ಲಿ ಸುನಿಶ್ಚಿತಧಾರೆಯಾಗಿ ಹರಿಯತೊಡಗಿತು.

ನಯೀ ಕವಿತೆಯ ಮುಖ್ಯ ಧೋರಣೆ ಎಂದರೆ ವೈಯಕ್ತಿಕತೆ. ಈ ವೈಯಕ್ತಿಕತೆ ಸಾಮಾಜಿಕತೆಯ ವಿರೋಧಿಯಲ್ಲ. ಬದಲಾಗಿ ಸಾಮಾಜಿಕ ಮೌಲ್ಯಗಳಿಗೆ ಹೊಸ ಅರ್ಥವತ್ತೆಯ ಸಶಕ್ತ ಆಧಾರ ನೀಡುತ್ತದೆ. ನಯೀಕವಿತೆಯ ಪ್ರಮುಖ ಕವಿಗಳೆಂದರೆ ಸರ್ವೇಶ್ವರ ದಯಾಲ್ ಸಕ್ಸೇನಾ, ವಿಜಯದೇವ ನಾರಾಯಣ ಸಾಹಿ, ಕುವರ ನಾರಾಯಣ, ಕೇದಾರನಾಥ ಸಿಂಹ, ದುಶ್ಯಂತಕುಮಾರ್, ಕೈಲಾಶ್ ವಾಜಪೇಯಿ, ಕೀರ್ತಿ ಚೌಧರಿ, ಮದನ ವಾತ್ಸಾಯನ ಮತ್ತು ಪ್ರತಾಪ ನಾರಾಯಣ ತ್ರಿಪಾಠಿ.

ಯುಗ ಯುಗಗಳಿಂದಲೂ ಅಸ್ಪೃಶ್ಯ ಸ್ವಾವಲಂಬಿಯಾಗಿ ಗೌರವದಿಂದ ಬದುಕುವ ಕನಸು ಕಾಣುತ್ತಲೇ ಬಂದಿದ್ದಾನೆ. ಅವನ ಈ ನಿರಾಶೆಯ ಸ್ಥಿತಿಯನ್ನು ಕೈಲಾಸ ವಾಜಪೇಯಿ ಹೀಗೆ ಚಿತ್ರಿಸುತ್ತಾರೆ —

ಮನುಷ್ಯ ಹುಟ್ಟುವ, ರೋಧಿಸುವ, ಸಾಯುವ
ಒಂದೇ ಅನುಭವವನ್ನು
ಮತ್ತೆ ಮತ್ತೆ ಕಾಣುವ, ಆಗಲೂ
ಅಸ್ತಿತ್ವ ಬದ್ಧನಾಗಿ ಏನ ಪಡೆವೆ
ಒಂಟಿ ನಾನು ವಿಷ ತಿಂದು ಬಿಡುವೆ.

ದಲಿತನಿಗೆ ಭವಿಷ್ಯದ ಬಗ್ಗೆ ಭರವಸೆಯಿಲ್ಲ. ಪ್ರಗತಿಯ ಆಕಾಂಕ್ಷೆಯಿಲ್ಲ, ಅವನು 'ಭಗ್ನಾಶಯ ಮಾನವ!' ಕೈಲಾಸ ವಾಜಪೇಯಿ ಚಿತ್ರಿಸುವಂತೆ —

ನಮ್ಮ ತುಟಿಗಳಲ್ಲಿ ಶೋಕಗೀತೆ
ಎಷ್ಟು ಬೇಸರ ಪಡಬಹುದೋ ಪಟ್ಟೆವು
ಈಗ ನಮ್ಮನ್ನು ಯಾವುದೇ ವ್ಯವಸ್ಥೆಯಲ್ಲಿ ಇಡಿ
ನಾವು ಜೀವಿಸಬಲ್ಲೆವು.

ಕುವರ ನಾರಾಯಣರು ಬಣ್ಣಿಸುವಂತೆ —

ನೆಗೆಯ ಬೇಕೆಂದೆನಿಸುತ್ತದೆ
ಹಳ್ಳವಿರಲಿ, ಬೆಂಕಿಯಿರಲಿ, ನೀರಿರಲಿ
ಅವೆಲ್ಲಕ್ಕಿಂತಲೂ ಭಯಂಕರವಾದದ್ದು ಈ ಭಲ
ಅದು ಜೀವನವೂ ಅಲ್ಲ, ಸಾವೂ ಅಲ್ಲ
ಕೇವಲ ಒಂದು ಅನಿಶ್ಚಿತತೆ.

ಅಸ್ಪೃಶ್ಯ ಈಗಲೂ ಉಪೇಕ್ಷಿತನೆ. ಮನುಷ್ಯನಿಗಿಂತ ಪೋಸ್ಟರ್‌ಗಳೇ ದೊಡ್ಡ ವಾಗಿವೆ. ಕೈಲಾಸ ವಾಜಪೇಯಿ ಈ ಉಪೇಕ್ಷಿತ ಅಸ್ಪೃಶ್ಯನನ್ನು ಕುರಿತು ಹೇಳುತ್ತಾರೆ—

'ನಾವೆಲ್ಲಾ ನಮ್ಮ ಸಾವಿಗೆ ಮೊದಲೇ, ಬಹಳ ಮೊದಲೇ
ಸತ್ತಿದ್ದೇವೆ.
ಮತ್ತು ಒಂದು ಇಕ್ಕಟ್ಟಾದ ಮರುಭೂಮಿಯಲ್ಲಿ
ನಮ್ಮನ್ನು ನಿಲ್ಲಿಸಿಯೇ ಹೂತುಬಿಡಲಾಗಿದೆ.'

ಈ ಪರಿಸ್ಥಿತಿಯಲ್ಲಿ ದಲಿತ ಗತ್ಯಂತರವಿಲ್ಲದೆ ಬದುಕಬೇಕಾಗಿದೆ. ಕೀರ್ತಿ ಚೌಧರಿ ಹೇಳುವಂತೆ —

ಇದೆಂತಹ ವಿವಶತೆ
ನಾವು ನಮ್ಮ ಸಹಜತೆಯನ್ನು
ಮರೆತಿದ್ದೇವೆ
ಬದುಕು ಎಷ್ಟು ಕಷ್ಟದಾಯಕವೆಂದರೆ
ಇದು ದುರ್ದಿನವೋ ಸುದಿನವೋ
ತಿಳಿಯದಾಗಿದೆ.

ದಲಿತ ಈ ಯುಗದ ಅಪಮಾನಿತ, ಅತ್ಯಾಚಾರಕ್ಕೆ ಒಳಗಾದವ. ದಿನವೂ ಒಂದಿಲ್ಲೊಂದು ಸುದ್ದಿ ಅವನದು. ಕೀರ್ತಿ ಚೌಧರಿ ಹೇಳುತ್ತಾರೆ —

'ನಮ್ಮ ನೋವಿನ ಗೀತೆ ನಾವೇ ಹಾಡುತ್ತೇವೆ.'

ದಲಿತದ 'ಅಸಹಾಯಕತೆ'ಯ ಚಿತ್ರ ಅನೇಕ ರೀತಿಯಲ್ಲಿ ಮೂಡಿದೆ. ಹೆಣ್ಣಿನ ಅಸಹಾಯಕತೆಯ ಚಿತ್ರ - 'ಶೋಕ ಮುದ್ರಾ' ಕವಿತೆಯಲ್ಲಿ ಮದನ ವಾತ್ಸಾಯನ ಹೀಗೆ ಮೂಡಿಸಿದ್ದಾರೆ —

ಮಾತೇ !
ಯುಗಗಳಿಂದಲೂ ಉಪೇಕ್ಷಿತಳಾದ ಮಾತೆ
ದಲಿತೆ, ದಾಸಿ, ದರಿದ್ರಾ.

ಕೈಲಾಸ ವಾಜಪೇಯಿ ಹೇಳುವಂತೆ 'ನಾರಿ' —

ನನ ಅಸ್ತಿತ್ವ ಯಾರಿಗೋ ಋಣಿ
ವಿಚಿತ್ರ ವಿವಶತೆ
ನಾರಿ ...
ಇದ್ದರೂ ಸಮಸ್ಯೆ
ಇಲ್ಲದಿದ್ದರೂ ಸಮಸ್ಯೆ.

ಇಷ್ಟೆಲ್ಲಾ ಯಾತನೆಗಳನ್ನು ಸಹಿಸಿಯು 'ದಲಿತ' ಭವಿಷ್ಯದ ಬಗ್ಗೆ ವಿಶ್ವಾಸವಿಟ್ಟಿದ್ದಾನೆಂದು ದುಶ್ಯಂತ ಕುಮಾರ್ ಹೇಳುತ್ತಾರೆ —

ನಾನು ಹೊಸತನ ಪಡೆಯಲು ಚರಕ ಯಂತ್ರವನ್ನೇರುತ್ತಿದ್ದೇನೆ
ನೆಣಸಾಡಂತ್ತ
ಹೊಸ ಹಾದಿಯ ರೂಪಿಸುತ್ತ ಮುನ್ನಡೆಯುತ್ತಿದ್ದೇನೆ.

ದಲಿತ ವರ್ಗದ ಮುಕ್ತಿಯ ಸಂದೇಶವನ್ನು ಕೇದಾರ ಸಿಂಹ ಹೀಗೆ ಚಿತ್ರಿಸುತ್ತಾರೆ —

ನಾಳೆ ಉದಿಸುತ್ತೇನೆ
ಬೆಳಗಿನ ಜಾವಕ್ಕೆ ಮುನ್ನವೇ ನಿನ್ನ ದ್ವಾರದಲ್ಲಿ.

ಹೀಗೆ ನಯೀ ಕವಿತೆಯಲ್ಲಿ ದಲಿತ ವರ್ಗದ ಒಂಟಿತನ, ಅಸಹಾಯಕತೆ, ನಿರಾಶೆ ಚಿತ್ರಿತವಾಗಿದೆ. ಸರ್ವೇಶ್ವರ ದಯಾಲ್ ಸಕ್ಸೇನಾರವರ ಕವಿತೆಗಳಲ್ಲಿ ಅರ್ಥಹೀನ ಬದುಕಿನ ವಿಷಮ ಪರಿಸ್ಥಿತಿಯಲ್ಲಿ ನುಚ್ಚುನೂರಾಗುತ್ತಿರುವುದರ ಚಿತ್ರವಿದೆ. ಹಾಗೆಯೇ ವಿಜಯದೇವ ನಾರಾಯಣ ಸಾಹಿಯವರು ದಲಿತನ ಅಸಹಾಯಕತೆಯನ್ನು ನೈಜವಾಗಿ ಚಿತ್ರಿಸಿದ್ದಾರೆ. ಕೇದಾರನಾಥ ಸಿಂಹ, ಕುವರ ನಾರಾಯಣ ಮೊದಲಾದ ಕವಿಗಳು ಆಶಾವಾದಿಗಳಾಗಿದ್ದು ದಲಿತರ ಮುಕ್ತಿಯ ಸಂಕಲ್ಪ ಮಾಡುತ್ತಾರೆ.

ಮೇಲಿನ ವಿವೇಚನೆಯಿಂದ ಹಿಂದಿ ಕಾವ್ಯದಲ್ಲಿ ದಲಿತರ ವಸ್ತುಸ್ಥಿತಿಯ ನೈಜ ಚಿತ್ರಣದ ಜೊತೆಗೆ ಅವರು ಅನುಭವಸುತ್ತಿರುವ ಯಾತನೆಗಳು, ಪಟ್ಟ ಪಾಡುಗಳು ಹಾಡುಗಳಾಗಿ ಇಷ್ಟಾದರೂ ಧೃತಿಗೆಡದೆ 'ನಾಳೆ ಉದಿಸುತ್ತೇವೆ' ಎಂಬ ದಲಿತರ ಆಶಾಭಾವಕ್ಕೆ ಕವಿತೆಯು ಕನ್ನಡಿ ಹಿಡಿಯಲಾಗಿದೆ ಎಂಬುದು ಸ್ಪಷ್ಟವಾಗುತ್ತದೆ.

(ಆಧಾರ : ಹಿಂದಿ ಸಾಹಿತ್ಯ ಮೇಂ ದಲಿತ ಚೇತನಾ – ಡಾ॥ ಆನಂದ ವಾಸ್ಕರ್)

# ಒಂದು ಕವಿತೆ

ಮೂಲ (ಅಸ್ಸಾಮಿ) : ಅನಿಸ್ ಉಜ ಜಮಾನ್
ಅನು : ಬಸಂತಿದೇವಿ
ಎನ್. ಎಸ್. ರಘುನಾಥ್

ಹೇಳಬಲ್ಲವರಾರು
ನದಿ ಬರುವುದೆಲ್ಲಿಂದ
ಎಲ್ಲಿಂದ ಬೀಸುವುದು ಗಾಳಿ
ಹೂವರಳುವುದು ಹೇಗೆ
ಹಕ್ಕಿಗಳು ಗುಂಪಾಗಿಯೆ ಹಾರುವುದು ಏಕೆ

ಕೃಷಿಕನೆಲ್ಲವ ಬಲ್ಲ
ಜನ್ಮದಾರಭ್ಯ ತಾನಿಲ್ಲಿ ಕಾಯುತ್ತಲಿದ್ದಾನೆ
ಕ್ಷೇತ್ರ ಮಧ್ಯದಲಿ ಕುಳಿತು

ಎಷ್ಟು ನೆರೆಯುಕ್ಕಿ ಬಂದಿತು
ಕರುಬಂಜದ ಚರ್ಮದಂತೆ ನೆಲ ಎಷ್ಟು ಸಾರಿ ಒಡೆದು ಸೀಳಿತು
ಎಷ್ಟು 'ಟುನಿ'ಯ ಕೊಕ್ಕಲ್ಲಿ
ಪಕ್ವ ಧಾನ್ಯಗಳು ಹೂವಾಗಿ ಅರಳಿದವು
ಎಂಬುದವನಿಗೆ ಗೊತ್ತು

ಅವನ ಪುರಾತನ ಕಣ್ಣುಗಳಲ್ಲಿ ಮಿಡಿತವಿದೆ

ಅವನಿಗೆ ಗೊತ್ತು
ನಿಂತಲ್ಲಿಂದಲೇ ಅವನು ಬೆಟ್ಟವನು ಕಾಣಬಹುದು
ನದಿಯ ನಿನಾದವನು ಕೇಳಬಹುದು

ಆಶ್ವೀಜದಲಿ ಬಿದಿರ ಹೂವರಳಿರಲು
ಅವನ ಕಣ್ಣುಗಳಲ್ಲಿ
ಕಣ್ಣ ನೀರಲ್ಲದೆ ಬೇರೇನು ಕಾಣದು

ಹೇ ಆತ್ಮದ ಅಮೋಘ ಮಂತ್ರವೆ

ಅವಸರದೊಂದೆ ಕೆಲಸ
ಗಾಳಿ ಬೀಸಿದಾಗ
ಹೂವರಳಿದಾಗ
ಹಕ್ಕಿಗಳು ಗುಂಪಾಗಿ ಹಾರಿದಾಗ
ಕೂಗಿ ಕರೆಯುತ್ತಾನೆ

ಅವನಿಗೆ ಗೊತ್ತಿರುವುದು ಕೇವಲ ಒಂದೇ ಹಾಡು
ಅದನ್ನೇ ಜನ್ಮಜನ್ಮಾಂತರದಿಂದಲೂ ಹಾಡುತ್ತಿದ್ದಾನೆ

ಅವನೆಲ್ಲಿಂದ ಬಂದ
ಎಲ್ಲಿಗೆ ಹೊಗುತ್ತಾನೆ
ಹೇಗೆ ಬಂದ
ಎಂದು ಕೇಳಿದರೆ
ಮೌನವಾಗಿ ದೂರದ ಬೆಟ್ಟದ ಕಡೆ ತೋರಿಸುತ್ತಾನೆ
ನದಿಯ ಕಡೆ, ಕ್ಷೇತ್ರದ ಕಡೆ ಬೆರಳು ಮಾಡುತ್ತಾನೆ

ಆದರೂ ಅವನಿಗೆಲ್ಲ ತಿಳಿದಿದೆ
ಜನ್ಮದಾರಭ್ಯ ಅವನಿಲ್ಲಿ ನಿಂತಿದ್ದಾನೆ

ಬಟ್ಟ ಬಯಲಲ್ಲೆ
ಅವನ ವಾಸ

# ಊರುಗೋಲು The Crutches

ಮೂಲ : ಬರ್ಟೋಲ್ಟ್ ಬ್ರೆಕ್ಟ್
ಅನು : ಶ್ರೀನಿವಾಸ್ ಎ. ಸುತ್ರಾವೆ

ಏಳು ವರ್ಷ ನನಗೆ ಒಂದು ಹೆಜ್ಜೆ ಇಡಲಿಕ್ಕಾಗಿದ್ದಿಲ್ಲ.
ಪ್ರಸಿದ್ಧ ವೈದ್ಯನ ಹತ್ತಿರ ನಾನು ಹೋದಾಗ
ಅವನು ಕೇಳಿದ : ಊರುಗೋಲು ಯಾಕೆ ?
ನಾ ಹೇಳಿದೆ : ನಾನು ಕುಂಟ.

ಅದಕ್ಕವನೆಂದ : ಅದೇನೂ ಆಶ್ಚರ್ಯದ ಮಾತಲ್ಲ.
ಎಲ್ಲಿ, ಇನ್ನೊಂದ್ಸಲ ಪ್ರಯತ್ನ ಮಾಡಪ್ಪ, ನೋಡೋಣ.
ನೀನು ಕುಂಟ ಅನ್ನೋದಾದರೆ, ಅದಕ್ಕೆ ಕಾರಣ ಈ ದರಿದ್ರ ಕೋಲುಗಳು.
ಎಲ್ಲಿ, ಕೆಳಗೆ ಬೀಳು ! ನೆಲದ ಮೇಲೆ ನಿಧಾನ ನಡಿ, ನೋಡೋಣ !

ಹಾಗೆ ಹೇಳಿ ಅವನು ನನ್ನ ಸೊಗಸಾದ ಊರುಗೋಲನ್ನು ತೆಗೆದುಕೊಂಡು
ಒಬ್ಬ ಸ್ನೇಹಿತ ಹಲ್ಲುಕಿರಿಯೋ ಹಾಗೆ ನಗ್ತಾ
ಅವನ್ನ ನನ್ನ ಬೆನ್ನ ಹಿಂದೆ ಮುರಿದು ಹಾಕಿ
ಬೆಂಕಿಗೂಡಿಗೆ ಹಾಕಿಬಿಟ್ಟ.

ಹೌದು, ನನಗೀಗ ವಾಸಿಯಾಗಿದೆ : ನಾನು ನಡೀಬಲ್ಲೆ.
ಬರೀ ಒಂದು ನಗುವಿನಿಂದ ವಾಸಿಯಾಗಿಬಿಡ್ತು.
ಆದರೂ, ಯಾವಾಗಲಾದರೂ ಕೋಲುಗಳನ್ನ ನೋಡಿದರೆ
ನಾನು ಮತ್ತೆ ಸ್ವಲ್ಪ ಹೊತ್ತು ಕೆಟ್ಟದಾಗಿ ನಡೀತೀನಿ.

# ಪೆಪೆ

ಮೂಲ : ಮ್ಯಾಕ್ಸಿಂಗಾರ್ಕಿ
ಅನು : ಕೆ.ಆರ್. ನಾರಾಯಣಶೆಟ್ಟಿ

ಪೆಪೆಗೆ ಹತ್ತು ವರ್ಷ, ಓತೀಕ್ಯಾತದ ಹಾಗೆ ತೆಳುವಾಗಿ, ಕೃಶವಾಗಿ ಚುರುಕಾಗಿದ್ದಾನೆ. ಬಣ್ಣಬಣ್ಣದ ಜೂಲಂಗಿ ಅವನ ಸಣಕಲು ಭುಜದಿಂದ ನೇತಾಡುತ್ತಿದೆ. ಬಿಸಿಲಿನ ಕೊಳಕಿನಿಂದ ಕಪ್ಪಾಗಿರುವ ಮೈ ಚರ್ಮ ಅದರ ನೂರಾರು ತೂತುಗಳಿಂದ ಇಣುಕುತ್ತಿದೆ.

ಸಮುದ್ರದ ಎಲರಿಗೆ ಅತ್ತಿಂದಿತ್ತ ಹೊಯ್ದಾಡುವ ಒಣಗಿದ ಹುಲ್ಲೆಸಳಿನಂತೆ ಕಾಣುತ್ತಾನೆ. ಬೆಳಗಿನಿಂದ ಬೈಗಿನವರೆಗೂ ದ್ವೀಪದ ಮೇಲೆ ಬಂಡೆಯಿಂದ ಬಂಡೆಗೆ ಜಿಗಿಯುತ್ತಾನೆ. ಅವನ ಕಿರು ದನಿ ನಿರಾಯಾಸವಾಗಿ ಹರಿವುದನ್ನು ಪದೇ ಪದೇ ಕೇಳಬಹುದು :

ಸುಂದರ ಇಟಲಿ,
ನನ್ನದೇ ಇಟಲಿ !

ಎಲ್ಲವೂ ಅವನನ್ನು ಕುತೂಹಲಗೊಳಿಸುತ್ತವೆ: ಫಲವತ್ತಾದ ಭೂಮಿಯ ಮೇಲೆ ಸಮ್ಮೋಹಕ ಸಂಭ್ರಮದಲ್ಲಿ ವಿಫುಲವಾಗಿ ಬೆಳೆದಿರುವ ಹೂಗಳು, ಕೆನ್ನೀಲಿಯ ಬಂಡೆಗಳ ಮೇಲೆ ಅಂಬಿನಂತೆ ಓಡುವ ಓತೀಕ್ಯಾತಗಳು, ಕಡಲ ತಳದ ಶ್ಯಾಮಲೋದ್ಯಾನದಲ್ಲಿನ ಮೀನುಗಳು, ಊರಿನ ಕಿರಿದಾದ ಸೊಟ್ಟ ಬೀದಿಗಳಲ್ಲಿ ಓಡಾಡುವ ವಿದೇಶೀಯರು.

ಕೂಡಲೇ ಸಿಡಿದಂತೆ ತೋರುವಷ್ಟು ಗರ್ವದಿಂದ ಬೀಗಿದ ಜರ್ಮನ್ನನ ಮೇಲೆ

ತನ್ನ ಚುರುಕುಗಣ್ಣು ನೆಟ್ಟು, "ಎಂಥ ಮೂರ್ತಿಯಿದು !" ಎಂದು ಪೆಪೆ ತನ್ನ ಒಡನಾಡಿಗಳಿಗೆ ಹೇಳುತ್ತಾನೆ. "ಅವನ ಮೋರೆ ನನ್ನ ಹೊಟ್ಟೆಯ ಹಾಗೆ ದಪ್ಪ !"

ಪೆಪೆಗೆ ಜರ್ಮನ್ನರೆಂದರೆ ಆಗದು. ಹಾದಿಬೀದಿಯ ಸಾಮಾನ್ಯ ಜನರ, ಬೆಳಕಿಲ್ಲದ ಸಣ್ಣ ಮದ್ಯದಂಗಡಿಗಳಲ್ಲಿ ದ್ರಾಕ್ಷಾರಸ ಕುಡಿದು, ಇಸ್ಪೀಟ್ ಆಡಿ, ದಿನಪತ್ರಿಕೆಗಳೋದಿ, ರಾಜಕೀಯ ಚರ್ಚಿಸುವ ಪಟ್ಟಣಿಗರ ವಿಚಾರ-ಭಾವನೆಗಳೇ ಅವನಿಗಿವೆ.

ಎಲ್ಲವನ್ನೂ ಆಲಿಸುವ ಪೆಪೆ, ಯಾವುದನ್ನೂ ಮರೆಯಲಾರ.

ಇಲ್ಲೊಬ್ಬ ಕತ್ತರಿಕಾಲಿನ ಮೊದ್ದು ಪರಂಗಿಯವ ದಾಪು ಹಾಕುತ್ತಿದ್ದಾನೆ. ಅವನ ಮುಂದೆ ಪೆಪೆ ಎಂಥದೋ ಚರಮಗೀತೆಯನ್ನೋ, ಶೋಕಗೀತೆಯನ್ನೋ ಗುನುಗುತ್ತಿದ್ದಾನೆ :

ನನ್ನ ಗೆಳೆಯ ಸತ್ತನು
ನನ್ನ ಮಡದಿ ಅತ್ತಳು....
ಎಂಥ ದುಃಖ ಅವಳದು
ನನಗೇನು ತಿಳಿಯದು.

ಪೆಪೆಯ ಒಡನಾಡಿಗಳು ಹೊಟ್ಟೆ ಹುಣ್ಣಾಗುವಂತೆ ನಗುತ್ತಾ ಅವನನ್ನು ಹಿಂಬಾಲಿಸುತ್ತಾರೆ. ಆ ವಿದೇಶಿಗ ನಿರ್ವಿಕಾರನಾಗಿ ಕಳೆಗುಂದಿದ ಕಣ್ಣುಗಳಿಂದ ಅವರೆಡೆ ದೃಷ್ಟಿ ಬೀರಿದಾಗ ಪೊದೆಗಳಲ್ಲೋ, ಗೋಡೆಗಳ ಮರೆಯಲ್ಲೋ ಅವಿತುಕೊಳ್ಳಲು ಇಲಿಗಳಂತೆ ದಿಕ್ಕಾಪಾಲಾಗಿ ಓಟಕೀಳುತ್ತಾರೆ.

ಪೆಪೆಯ ಬಗ್ಗೆ ಇನ್ನೆಷ್ಟೋ ವಿನೋದಕರ ಕತೆಗಳನ್ನು ಹೇಳಬಹುದು.

ಒಂದು ದಿನ ಒಬ್ಬಾಕೆ ತನ್ನ ತೋಟದ ಸೇಬಿನ ಹಣ್ಣುಗಳನ್ನು ಬುಟ್ಟಿಯಲ್ಲಿ ತುಂಬಿ ತನ್ನ ಸ್ನೇಹಿತೆಗೆ ಕೊಟ್ಟು ಬರಲು ಇವನನ್ನು ಕಳುಹಿಸುತ್ತಾ, "ಒಂದು ಸಾಲ್ಡೊ* ಕೊಡ್ತೀನಿ. ನಿನಗೆ ಯಾತಕ್ಕಾದರೂ ಬೇಕಾಗುತ್ತೆ", ಅಂದಳು.

ಪೆಪೆ ಮರುಮಾತಾಡದೆ ಬುಟ್ಟಿ ಎತ್ತಿ ತಲೆ ಮೇಲೆ ಸರಿದೂಗಿಸಿಕೊಂಡು ಹೊರಟ. ಸಾಲ್ಡೊಗಾಗಿ ಸಂಜೆಯವರೆಗೂ ಹಿಂತಿರುಗಲಿಲ್ಲ.

"ಆತುರವೇ ಇರ್ಲಿಲ್ಲ, ನಿನಗೆ." ಎಂದಾಕೆ ಕೇಳಿದಳು.

"ಓ, ಅಮ್ಮಾವ್ರೆ, ಸಖತ್ ಸುಸ್ತಾಗೈತೆ," ನಿಟ್ಟುಸಿರು ಬಿಡುತ್ತಾ ಪೆಪೆ ಹೇಳಿದ. "ಹತ್ತಕ್ಕಿಂತ ಜಾಸ್ತಿ ಇದ್ದೊ ನೋಡಿ."

---

* ಇಟಲಿಯ ಅರ್ಧ ಪೆನಿ ನಾಣ್ಯ.

"ಯಾಕೆ, ಹೌದಲ್ಲ. ಹತ್ರಕ್ಕಿಂತ ಜಾಸ್ತಿ ಇದ್ದೇ ಇದ್ವೊ. ತುಂಬಿದ ಬುಟ್ಟಿ ಅರ್ಧ್ಯಾನೊ ಆದಾ."

"ಸೇಬಲ್ಲ, ಅಮ್ಮಾವ್ರೆ, ಹುಡುಗ್ರು."

"ಸೇಬೇನು ಮಾಡ್ದ್ರೋ ?"

"ಮೊದಲು ಹುಡುಗರ ವಿಷಯ, ಅಮ್ಮಾವ್ರೆ : ಪಿಪೆಲಿ, ಗಿಯೋವನ್ನಿ...."

ಅವಳಿಗೆ ಸಿಟ್ಟು ಬಂತು. ಅವನ ಭುಜ ಹಿಡಿದು ಅಲುಗಾಡಿಸಿ, "ಹೇಳೊ ಸೇಬು ಕೊಟ್ಟು ಬಂದೋ ಇಲ್ವೋ ?" ಎಂದು ಕಿರಿಚಿದಳು.

"ಚಾಕನವರೆಗೂ ಜೊತ್ಯೋಂಡ್ ಹೋದೆ, ಅಮ್ಮಾವ್ರೆ. ಎಷ್ಟು ಪೈನಾಗಿ ನಡಕೊಂಡೆ ಅಂತ ಕೇಳಿ. ದೊಪದೊಪ್ನ ಅವರು ಕಿಚಾಯಿಸಿದ್ರೂ ಕ್ಯಾರೆ ಅನ್ಲಿಲ್ಲ. ನನ್ನನ್ನ ಕತ್ತೆಗೆ ಹೋಲಿಸ್ಲಿ, ಅಮ್ಮಾವ್ರ ಮೇಲಿಟ್ಟಿರೋ ಗೌರವಕ್ಕಾಗಿ, ನಿಮ್ಮೇಲೆ, ಅಮ್ಮಾವ್ರೆ, ಎಲ್ಲಾನೂ ಸಹಿಸ್ಕೋತೇನೆ ಅಂತ ನನ್ನಷ್ಟಕ್ಕೆ ಅಂದುಕೊಂಡೆ. ಆದ್ರೆ ನಮ್ಮವ್ರನ್ನ ಲೇವಡಿ ಮಾಡೋಕೆ ಹೊರಟಾಗ ಅತಿಯಾಯ್ತೂಂತ ಅನ್ನಿಸ್ತು. ಬುಟ್ಟಿ ಕೆಳಗಿಟ್ಕೋನೆ. ನೋಡ್ಬೇಕಾಗಿತ್ತು ನೀವು, ಪ್ರಖ್ಯಾತಿಗಿತ್ತಿ ನಮ್ಮವ್ವ, ಎಷ್ಟು ಚೆಂದಾಗಿ ಆ ಪೋಕರಿಗಳ್ಗೆ ಸೇಬಣ್ಣಿಂದ ಬಾರಿಸ್ದೆ ಅಂತೀರ. ನೀವು ಭಾರಿ ಖುಷಿ ಪಡ್ತಿದ್ರಿ ಅದ್ನ."

"ನನ್ನ ಹಣ್ಣ್ ಕಳ್ಬುಟ್ರೂ !" ಎಂದು ಆ ಹೆಂಗಸು ಬೊಬ್ಬೆ ಹೊಡೆದಳು.

ಪೆಪೆ ವ್ಯಥೆಯಿಂದ ನಿಟ್ಟುಸಿರುಬಿಟ್ಟ.

"ಓ, ಇಲ್ಲ. ಗುರಿ ತಪ್ಪಿದ ಸೇಬು ಗೋಡೆಗ್ಬಿದ್ದು ಚೂರ್‌ಚೂರಾದೊ. ಆದ್ರೆ ವೈರಿಗಳನ್ನ ಸೋಲ್ಸಿ ರಾಜಿ ಮಾಡ್ಕೊಂಡ್ ಮೇಲೆ ಮಿಕ್ಕವನ್ನೆಲ್ಲಾ ತಿಂದೊ...."

ಪೆಪೆಯ ಪುಟ್ಟ ಜೋಲು ಬುರುಡೆಯ ಮೇಲೆ ಬೈಗಳದ ಸುರಿಮಳೆಯನ್ನೇ ಆಕೆಯು ಕರೆದಳು. ಕೆಲವು ವಿಶಿಷ್ಟವಾಗಿ ಆಯ್ದ ವಾಕ್ಯಸರಣಿ ಬಗ್ಗೆ ಮೆಚ್ಚುಗೆಯಿಂದ ಪದೇ ಪದೇ ಲೊಚ್ಚೆ ಹಾಕುತ್ತಾ ಪೆಪೆ ಗಮನವಿಟ್ಟು ನಮ್ರನಾಗಿ ಆಲಿಸಿದ "ಓಹೋ, ಪಸಂದಾಗಿದೆ. ಎಂಥ ಭಾಷೆ !"

ಕೊನೆಗೂ ಆಕೆಯ ಕೋಪ ಇಳಿದು, ಅವನನ್ನ ಬಿಟ್ಟು ಹೊರಟಾಗ, ಹಿಂದಿನಿಂದ ಕೂಗಿ ಹೇಳಿದ :

"ಕೆಲಸಕ್ಕೆ ಬಾರದ ಆ ಕೊಳಕು ತಲೆಗಳ್ಗೆ ನಿಮ್ಮ ಸುಂದರ ಸೇಬಣ್ಣಿಂದ ಹ್ಯಾಗೆ ಚಿಗ್ಗಾಪಾಗ್ಗಾ ಚಚ್ಚೆ ಅನ್ನೋದ ನೀವು ನೋಡಿದ್ರೆ, ಅಮ್ಮಾವ್ರೆ, ನಿಮ್ಗೆ ಹೀಗನ್ನಿಸ್ತಿಲ್ಲ. ನೀವೇನಾದ್ರೂ ನೋಡಿದ್ರೆ, ಒಂದಲ್ಲ ಎರಡು ಸಾಲ್ಡಿ ಕೊಡ್ತಿದ್ರಿ."

ಆ ಪೆದ್ದ ಹೆಂಗಸು ಈ ವಿಚೇತನ ನಿರಾಡಂಬರ ಹೆಮ್ಮೆಯನ್ನ ಅರ್ಥಮಾಡಿಕೊಳ್ಳದೆ, ಅವನೆಡೆ ಮುಷ್ಟಿ ಎತ್ತಿದಳು.

ಪೆಪೆಗಿಂತ ದೊಡ್ಡವಳಾದರೂ ಅವನಷ್ಟು ಚಾಲಾಕಿಲ್ಲದ ಅವನ ಸೋದರಿ, ಶ್ರೀಮಂತ ಅಮೇರಿಕನ್ನನ ಮನೆಗೆ ಪರಿಚಾರಕಿಯಾಗಿ ಕೆಲಸ ಮಾಡಲು ಹೋಗುತ್ತಿದ್ದಳು.

ಅವಳ ಚಹರೆ ಬಲು ಬೇಗನೆ ಬದಲಾಯಿತು ; ಒಪ್ಪ-ಓರಣ ಬಂತು, ಕೆನ್ನೆ ಗುಲಾಬಿಯಾಯಿತು, ಗ್ರೀಷ್ಮದ ಪೇರುಹಣ್ಣಿನಂತೆ ಬಲಿತು ರಸ ತುಂಬತೊಡಗಿದಳು.

"ದಿನಾಲೂ ಉಣ್ತೀಯಾ ?" ಒಮ್ಮೆ ಅವಳ ತಮ್ಮ ಕೇಳಿದ.

"ದಿನಾ ಎರಡ್ಸಾರಿ, ಬೇಕೂಂದ್ರೆ ಮೂರ್ಸಾರಿ," ಹೆಮ್ಮೆಯಿಂದ ಅವಳಂದಳು.

"ನೋಡು, ಹಲ್ ಸವೆದೋಯ್ತ್ವೆ, ಉಷಾರು," ಪೆಪೆ ತಿಳುವಳಿಕೆ ಹೇಳಿದ.

ಸ್ವಲ್ಪ ವಿರಾಮದ ನಂತರ ವಿಚಾರಿಸಿದ, "ನಿಮ್ಮ ಒಡೇರು ಭಾರಿ ಸಾಪ್ಕಾರ್ರಾ?"

"ಹೌದೌದು, ದೊರೆಗಿಂತ್ಲೂ ಸಾಪ್ಕಾರ್ರೇ ಇರ್ಬೇಕು."

"ನಂಗೆ ಟೋಪಿ ಹಾಕೋಕಾಗಲ್ಲಮ್ಮ ! ಹಂಗಾರೆ ಅವರ್ಹತ್ರ ಎಷ್ಟ್ ಷರಾಯಿವೆ, ಹೇಳು ?"

"ಹೇಳೋದು ಕಷ್ಟ."

"ಹತ್ತು ?"

"ಇನ್ನೂ ಮಸ್ತಾಗಿರ್ಬೋದು...."

"ಹಂಗಾರೆ ನಂಗೊಂದ್ ತಗೊಂಬಾ. ಕಾಲು ತುಂಬಾ ಉದ್ದಾಗಿರ್ಬಾರ್ದು, ಆದ್ರೆ ತುಂಬಾ ಬೆಚ್ಚಗಿರ್ಬೇಕು," ಎಂದ ಪೆಪೆ.

"ಯಾಕೆ ?"

"ಆಯ್ತು, ನಂದು ಒಂದ್ಸಾರಿ ನೋಡು."

ಪೆಪೆಯ ಷರಾಯಿ ತುಂಬಾ ಹರಿದಿದ್ದರಿಂದ ನಿಜವಾಗಿ ನೋಡುವಂಥದೇನೂ ಇರಲಿಲ್ಲ.

"ಹ್ಞೂ," ಅವನಕ್ಕ ಒಪ್ಪಿಕೊಂಡಳು. "ಹೌದು, ನಿಂಗೆ ನಿಜವಾಗ್ಲೂ ಒಂದಷ್ಟು ಬಟ್ಟೆ ಬೇಕು, ಸ್ಸರಿ. ಆದ್ರೆ ನಾವು ಕದ್ದಿದೀವೀಂತ ಅನ್ಸೊಕೊಳೋಲ್ಲವಾ ಅಪ್ಪ ?"

"ಜನ ನಮ್ಗಿಂತ ದಡ್ಡ್ರೂಂತ ತಿಳ್ಕೋಬೇಡ", ಪೆಪೆ ಅವಳಿಗೆ ಧೈರ್ಯ ತುಂಬಿದ. "ಮಸ್ತಾಗಿರೋರಿಂದ ಒಸಿ ತಗೊಂಡ್ರೆ ಅದು ಕದ್ದಂಗಲ್ಲ, ಹಂಚಿಕೊಂಡಂಗೆ."

"ಹುಚ್ಚುಚ್ಚಾಗಿ ಮಾತಾಡ್ತಿದ್ದೀ", ಎಂದು ಅವನಕ್ಕ ಆಕ್ಷೇಪಿಸಿದರೂ, ಪೆಪೆ ಅವಳ ಅಳುಕನ್ನು ಬೇಗನೆ ನಿವಾರಿಸಿದ. ತೆಳು ಕಂದು ಬಣ್ಣದ ಚೆನ್ನಾಗಿದ್ದ ಒಂದು ಷರಾಯಿಯನ್ನು ಅಡುಗೆ ಮನೆಗೆ ಅವಳು ಹಿಡಿದುಕೊಂಡು ಬಂದಾಗ, ಅದು ವಾಸ್ತವವಾಗಿ ಪೆಪೆಗೆ ಬಹಳ ದೊಡ್ಡದಾಗಿದ್ದರೂ, ಹೇಗೆ ಅದನ್ನು ಸರಿಪಡಿಸಿಕೊಳ್ಳಬೇಕೆಂದು ತಕ್ಷಣ ಅವನಿಗೆ ಹೊಳೆಯಿತು.

"ಚಾಕು ಕೊಡಿಲ್ಲಿ", ಅಂದ.

ಅವರಿಬ್ಬರೂ ಸೇರಿ ಆ ಅಮೆರಿಕನ್ನನ ಷರಾಯಿಯನ್ನು ಪೆಪೆಗೆ ಅನುಕೂಲಕರವಾದ ಉಡುಪನ್ನಾಗಿ ಪರಿವರ್ತಿಸಿದರು. ಅವರ ಪ್ರಯತ್ನದ ಫಲದಿಂದಾಗಿ ಭುಜಗಳಿಗೆ ಏನೋ ಅಂಟಿಸಿದ ಒಂದು ರೀತಿಯ ಚೀಲವಾಗಿ ಕುತ್ತಿಗೆ ಸುತ್ತ ದಾರದಿಂದ ಕಟ್ಟುವಂಥ

ಪೊಗಳೆ ಚಲ್ಲಣವಾಯಿತು, ಪರಾಯಿ ಜೇಬುಗಳು ಅಂಗಿ ತೋಳುಗಳಂತೆ ಉಪಯೋಗವಾದವು.

ಪರಾಯಿ ಮಾಲೀಕನ ಹೆಂಡತಿ ಅಷ್ಟು ಒರಟಿದ್ದಿದ್ದರೆ ಇನ್ನೂ ಉತ್ತಮವಾದ, ಹೆಚ್ಚು ಅನುಕೂಲಕರವಾದ ಉಡುಪನ್ನಾಗಿ ಪರಿವರ್ತಿಸುತ್ತಿದ್ದರೇನೋ. ಅಡಿಗೆ ಮನೆಗೆ ಬಂದವಳೆ, ನಾನಾ ಭಾಷೆಗಳ ಪೋಲಿಸು ಪದಗಳಲ್ಲಿ, ಅಮೆರಿಕನ್ನರ ರೂಢಿಯಂತೆ ಅಷ್ಟೇ ಕೆಟ್ಟದಾಗಿ ಉಚ್ಚರಿಸುತ್ತಾ ಕೋಪದ ಕಂಪವನ್ನು ಕಾರಿದಳು.

ಅವಳ ವಾಗ್ಝರಿಯ ಓಟ ತಡೆಗಟ್ಟಲು ಪೆಪೆಗೆ ಸಾಧ್ಯವಾಗಲಿಲ್ಲ. ಅವನು ಹುಬ್ಬು ಗಂಟಿಕ್ಕಿದ, ಎದೆ ಮೇಲೆ ಕೈಯೊತ್ತಿಕೊಂಡ, ಹತಾಶೆಯಿಂದ ಬಿಗಿಯಾಗಿ ತಲೆ ಹಿಡಿದುಕೊಂಡ, ಜೋರಾಗಿ ನಿಟ್ಟುಸಿರು ಬಿಟ್ಟ. ಆದರೂ ಅವಳ ಗಂಡ ಅಲ್ಲಿಗೆ ಬರುವವರೆಗೂ ಅವಳು ಶಾಂತಳಾಗಲಿಲ್ಲ.

"ಏನಿದೆಲ್ಲ ರಂಪ?" ಎಂದು ಅವನು ಕೇಳಿದ್ದಕ್ಕೆ ಪೆಪೆ ಹಿಂಜರಿಯದೆ ನಿರ್ಭೀತನಾಗಿ ಹೇಳಿದ :

"ಅಯ್ಯಾವ್ರೆ, ನಿಮ್ಮ ಅಮ್ಮಾವ್ರು ಎಬ್ಬಿಸಿದ ಗದ್ದಲದಿಂದ ತುಂಬ ಬೆರಗಾಗಿದೀನಿ. ನಿಜ ಹೇಳಬೇಕೂಂದ್ರೆ, ನಿಮಗೋಸ್ಕರ ನನ್ ಮನಸ್‌ಗೆ ರವಷ್ಟು ನೋವಾಯ್ತು. ನಾವು ಪರಾಯಿ ಹಾಳುಮಾಡಿದಿವೀಂತ ಅನ್ಕೊಂಡಿದಾರೆ. ಆದ್ರೆ ನಂಗದು ಸರ್‍ಯಾಗಿದೇಂತ ನಿಮಗೆ ಭರವಸೆ ಕೊಡ್ತೀನಿ. ನಿಮಗಿರೋ ಒಂದೇ ಪರಾಯನ್ನು ತಗೊಂಡಿದೀನಿ, ಇನ್ನೊಂದು ಕೊಂಡುಕೊಳ್ಳೋ ಶಕ್ತಿ ನಿಮಗಿಲ್ಲಾಂತ ಅಮ್ಮಾವ್ರು ಅಂದುಕೊಂಡಿರೋ ಹಾಗೆ ಕಾಣುತ್ತೆ..."

ಸೌಮ್ಯವಾಗಿ ಮಾತನ್ನಾಲಿಸಿದ ಅಮೆರಿಕದವ ಹೇಳಿದ, "ಪೋಲೀಸ್ ಕರೆಸಬೇಕಾಗುತ್ತೆ, ಹುಡುಗ."

"ನಿಜವಾಗ್ಲೂ, ಯಾಕೆ ?" ಪೆಪೆ ಆಶ್ಚರ್ಯದಿಂದ ಪ್ರಶ್ನೆ ಹಾಕಿದ.

"ನಿನ್ನನ್ನು ಜೈಲಿಗೆ ಎಳಕೊಂಡು ಹೋಗೋಕೆ...."

ಪೆಪೆ ತುಂಬ ನೊಂದುಕೊಂಡ. ನಿಜವಾಗಲೂ ಇನ್ನೇನು ಅತ್ತೇ ಬಿಡಬೇಕು, ಆದರೆ ಕಣ್ಣೀರು ನುಂಗಿ, ಶ್ರೀಮದ್ಗಾಂಭೀರ್ಯದಿಂದ ಹೇಳಿದ :

"ಅಯ್ಯಾವ್ರೆ, ಜನಗಳ್ನ ಜೈಲಿಗೆ ಕಳಿಸೋದು ನಿಮಗೆ ಖುಷಿ ಕೊಡೋದಾದ್ರೆ, ಅದು ನಿಮಗ್ ಬಿಟ್ಟಿದ್ದು. ಆದ್ರೆ ನನಗೇನಾದ್ರೂ ಜಾಸ್ತಿ ಪರಾಯಿದ್ದು, ನಿಮಗೆ ಒಂದೂ ಇಲ್ದೆ ಇದ್ದಿದ್ರೆ ನಾನು ಹಂಗೆ ಮಾಡ್ತಿರಲಿಲ್ಲ. ಎರಡಲ್ಲ, ಮೂರು ಕೊಟ್ಟುಬಿಡ್ತಿದ್ದೆ ನಿಮಗೆ, ಒಂದೇ ಸರ್ತಿಗೆ ಮೂರು ಪರಾಯನ್ನೂ ಹಾಕ್ಕೊಳ್ಳೋಕಾಗ್ದೇಯಿದ್ರೂ, ಅದೂ ಸೆಕೆಗಾಲ್ದಲ್ಲಿ...."

ಅಮೆರಿಕದವ ಫಕ್ಕನೆ ನಕ್ಕ, ಏಕೆಂದರೆ ಶ್ರೀಮಂತರೂ ಕೆಲವು ಸಾರಿ ತಮಾಷೆ ಅರ್ಥಮಾಡಿಕೊಳ್ಳಬಲ್ಲರು. ಪೆಪೆಗೆ ಚಾಕೊಲೆಟ್ ಕೊಡಿಸಿ, ನಾಣ್ಯವನ್ನೂ ಕೊಟ್ಟ. ಪೆಪೆ ನಾಣ್ಯ ಕಚ್ಚಿ, ದಾಸಿಯನ್ನು ವಂದಿಸಿ ಹೇಳಿದ :

"ಥ್ಯಾಂಕ್ಸ್, ಅಯ್ಯಾವ್ರೆ ! ನಾಣ್ಯ ಸಾಚಾ ಅಂದುಕೊಳ್ಳಾ ?"

ಕಲ್ಲುಬಂಡೆಗಳ ನಡುವೆಯೆಲ್ಲೋ ನಿಂತು ಶಿಲಾಸೃಷ್ಟಿಯ ನಿಗೂಢ ಇತಿಹಾಸವನ್ನು ಅಭ್ಯಸಿಸುವ ರೀತಿಯಲ್ಲಿ ಅವುಗಳ ಬಿರುಕನ್ನು ಯೋಚನಾಮಗ್ನನಾಗಿ ಪರೀಕ್ಷಿಸುವಾಗ ಪೆಪೆ ಅತ್ಯುತ್ತಮ ಸ್ಥಿತಿಯಲ್ಲಿರುತ್ತಾನೆ. ಅಂತಹ ಕ್ಷಣಗಳಲ್ಲಿ ಅವನ ಹೊಳಪುಗಣ್ಣುಗಳು ವಿಸ್ಮಯದಿಂದ ಹಿಗ್ಗಿ ನೀರಾಡುತ್ತವೆ, ಕೃಶವಾದ ಕೈಗಳು ಬೆನ್ನ ಹಿಂದೆ ಹೆಣೆದುಕೊಳ್ಳುತ್ತವೆ, ತಲೆ ನಸುಬಾಗಿ ಮೆಲ್ಲೆಲರಿಗೆ ಸಿಲುಕಿದ ಹೂವಿನಂತೆ ಅತ್ತಿತ್ತ ತುಸು ತೊನೆದಾಡುತ್ತದೆ. ತನ್ನೊಳಗೇ ಮೃದುವಾಗಿ ಯಾವುದೋ ರಾಗವನ್ನು ಗುನುಗುತ್ತಾನೆ, ಏಕೆಂದರೆ ಅವನು ಸದಾ ಹಾಡುತ್ತಿರುತ್ತಾನೆ.

ದೂರದಿಂದ, ಯಾವುದೋ ದೊಡ್ಡ ತಮಟೆಯ ಸದ್ದಿನಂತೆ ಕಡಲ ನಿಟ್ಟುಸಿರು ಮೆಲ್ಲನೆ ತೇಲಿ ಬರುತ್ತದೆ. ಕುಸುಮ ರಾಶಿಯ ಮೇಲೆ ಪತಂಗಗಳು ಒಂದನ್ನೊಂದು ಬೆನ್ನಟ್ಟುತ್ತವೆ. ಸೂರ್ಯ ಪ್ರಕಾಶಕ್ಕೆ ಪಿಳಿಪಿಳಿ ನೋಡುತ್ತಾ ತುಸು ಈರ್ಷ್ಯೆ–ವಿಷಾದ ಮಿಶ್ರಿತ ನಸುನಗೆಗೆ ತುಟಿ ಅರೆತೆರೆದು, ಆದರೂ ಪೃಥ್ವಿಯ ಶ್ರೇಷ್ಠ ಜೀವಿಯ ಉದಾತ್ತ ಮಂದಹಾಸದಿಂದ ಪೆಪೆ ತಲೆಯೆತ್ತಿ ಅವುಗಳ ಹಾರುವಿಕೆಯನ್ನು ಅನುಸರಿಸುತ್ತಾನೆ.

ಪಚ್ಚೆಹಸುರಿನ ಓತೀಕ್ಯಾತವನ್ನು ಬೆದರಿಸಲು ಚಪ್ಪಾಳೆ ತಟ್ಟುತ್ತಾ, 'ಚೂ' ಎಂದು ಕೂಗುತ್ತಾನೆ.

ಸಾಗರ ದರ್ಪಣದಂತೆ ಶುಭ್ರವಾಗಿದ್ದಾಗ. ತೆರೆಗಳ ಶ್ವೇತ ಜರತಾರಿ ಬುರುಗಿನಿಂದ ಕಲ್ಲುಬಂಡೆಗಳು ಅಲಂಕಾರಗೊಂಡಿಲ್ಲದಿದ್ದಾಗ, ಪೆಪೆ, ಶಿಲಾರೋಹಣನಾಗಿ, ಸಾಗರದ ಕೆಂಪು ಸಸ್ಯರಾಶಿಯ ಮಧ್ಯೆ ಸರಾಗವಾಗಿ ತೇಲಿಕೊಂಡು ಹೋಗುವ ಮೀನು, ಸರಸರನೆ ಅತ್ತಿಂದಿತ್ತ ಚಿಮ್ಮುವ ಸೀಗಡಿ, ಅಕ್ಕಪಕ್ಕ ತೆವಳುವ ಏಡಿಗಳಿರುವ ಪಾರದರ್ಶಕ ಜಲವನ್ನು ಹೊಳಪು ಕಂಗಳಿಂದ ಎವೆಯಿಕ್ಕದೆ ನೋಡುತ್ತಾನೆ. ಆ ನೀರವತೆಯಲ್ಲಿ ಹುಡುಗನ ಸ್ಪಷ್ಟ ದನಿ ನೀಲಜಲದ ಮೇಲೆ ಸಲಿಲವಾಗಿ ಹರಿಯುತ್ತೆ :

"ಕಡಲೇ, ಓ, ಕಡಲೇ...."

ವಯಸ್ಕರು ಪೆಪೆಯ ಬಗ್ಗೆ ಬಹಳ ಸಾರಿ, "ಅವ ಅರಾಜಕನಾಗ್ತಾನೆ" ಎಂದು ಹೇಳುತ್ತಾ ಅಸಮ್ಮತಿ ಸೂಚಕವಾಗಿ ತಲೆಯಾಡಿಸುತ್ತಾರೆ.

ಆದರೆ ಹೆಚ್ಚು ವಿವೇಚನಾಶಕ್ತಿಯುಳ್ಳ ಸಹಾನುಭೂತಿಪರರ ಅಭಿಪ್ರಾಯವೇ ಬೇರೆ :

"ಪೆಪೆ ನಮ್ಮ ನಾಡಕವಿಯಾಗುತ್ತಾನೆ..."

ಬೆಳ್ಳಿಯಲ್ಲಿ ಎರಕಹುಯ್ದಂತೆ ಕಾಣುವ ತಲೆ, ಪ್ರಾಚೀನ ರೋಮಿನ ನಾಣ್ಯಗಳ ಮೇಲೆ ಕೊರೆದಂತಹ ಮುಖವಿದ್ದ ಮುದುಕ ಅಲಮಾರು ಮಾಡುವ ಪಾಸ್‌ಕ್ವಾಲಿನೊ. ವಿವೇಕಿ, ಜನಮಾನ್ಯ ಪಾಸ್‌ಕ್ವಾಲಿನೊಗೆ ತನ್ನದೇ ಅಭಿಪ್ರಾಯವಿದೆ :

"ನಮ್ಮ ಮಕ್ಕಳು ನಮಗಿಂತ ಎಷ್ಟೋ ಪಾಲು ಉತ್ತಮ, ಅವರ ಬದುಕೂ ಚೆನ್ನಾಗಿರುತ್ತೆ."

ಅವನ ಮಾತನ್ನು ಬಹಳ ಜನ ನಂಬುತ್ತಾರೆ.

# ಬಾಗಿಲುಗಳು ಮುಚ್ಚಿವೆ :

ಮೂಲ (ಹಿಂದಿ) : ಸರ್ವೇಶ್ವರ ದಯಾಲ ಸಕ್ಸೇನಾ
ಅನು : ಮುಕುಂದ ಜೋಷಿ

ಬಾಗಿಲುಗಳು ಮುಚ್ಚಿವೆ
ಯಾರೂ ಇಲ್ಲ ಮನೆಯಲ್ಲಿ
ನೆನಪುಗಳ ಹೊರತಾಗಿ

ಬಿರುಕಿನಿಂದ ಬಂದ ಬೆಳಕು
ಮೌನದ ನರನಾಡಿಗಳಂತೆ
ಉಬ್ಬಿ ನಿಂತಿದೆ
ಗೋಡೆಗಳ ಮೇಲೆ

ಮೂಗಿನ ಹೊರಳಿಗಳಿಂದ ಮಿದುಳಿನವರೆಗೆ
ಹರಿದಾಡುವ ಗಂಧ
ವಾಯುವಿನ ಬಂದಿ

ನೀನು ಗೋಡೆ ಹಾರಿ
ಒಳಗೆ ಬಂದಾಗ
ನಿನಗೇನು ಅನಿಸುವದೋ
ನಾನರಿಯೆ

ಬಿಳುಪು ಹಳದಿಯಾಗಿ ಬಿಟ್ಟಿರಬಹುದು
ಕತ್ತಲೆ ತಿಕ್ಕಾಡುತ್ತ
ಧೂಳಾಗಿ ಹೆಪ್ಪುಗಟ್ಟುತ್ತಿರಬಹುದು

ನಿನ್ನ ಕೈ
ಗಡಿಯಾರದ ಸೂಜಿಯನ್ನು ಅಲುಗಾಡಿಸುವವು
ಮತ್ತು ಒಂದು ಪರಿತ್ಯಕ್ತ ಗೂಡು
ನಿನ್ನ ಮೇಲೆ, ಕೆಳಗೆ ಬೀಳಬಹುದು

ಸಮಯ ರತ್ನಗಂಬಳಿಯ ಕೆಳಗೆ
ಬಿದ್ದಿರಬಹುದು
ಇರುವೆಗಳು ಅದನ್ನು ಎಳೆದು
ತೆಗೆದುಕೊಂಡು ಹೊರಟಿರಬಹುದು.

## ರಾತ್ರಿಯಲ್ಲಿ ಮಳೆ

---

ಮೂಲ (ಹಿಂದಿ) : ಸರ್ವೇಶ್ವರ ದಯಾಲ ಸಕ್ಸೇನಾ
ಅನು : ಮುಕುಂದ ಜೋಷಿ

ನನ್ನ ಶ್ವಾಸಗಳ ಮೇಲೆ ಇಳಿಯಂತೊಡಗಿದೆ ಮೋಡ
ಕಣ್ಣೆವೆಗಳ ಮೇಲೆ ಬಾಗಿದೆ ಆಕಾಶ
ಕ್ಷಿತಿಜ ನನ್ನ ಭುಜಗಳ ಜೊತೆ ಹೊಡೆಯುತ್ತಿದೆ ಧಿಕ್ಕಿ
'ಇಂದು ರಾತ್ರಿ ಮಳೆಯಾಗುವದು
ಎಲ್ಲಿರುವೆ ನೀನು ?

ಮೋಡಗಳ ಮೇಲೆ ಆಕಾಶದಲ್ಲಿ
ನಾನೊಂದು ದೊಡ್ಡ ಆಕ್ವೇರಿಯಮ್ ಸೃಷ್ಟಿಸಿದ್ದೇನೆ
ಮತ್ತದರಲ್ಲಿ ಬಿಟ್ಟಿದ್ದೇನೆ
ಅಸಂಖ್ಯ ಬಣ್ಣ ಬಣ್ಣದ ಮೀನುಗಳನ್ನು
ತುಂಬಿದ್ದೇನೆ ಇಡೀ ಸಮುದ್ರ ಅದರಲ್ಲಿ
ಇಂದು ರಾತ್ರಿ ಒಡೆಯುವದು ಆಕ್ವೇರಿಯಮ್
ಮತ್ತೆ
ಬೀಳುವವು ಬಣ್ಣ ಬಣ್ಣದ ಮೀನುಗಳು –
ತುಂತುರು ಸೆಳಕಿನ ಪ್ರತಿ ಹನಿಗಳ ಜೊತೆ
ಎಲ್ಲಿರುವೆ ನೀನು ?
ಹನಿಗಳ ಮೇಲೆ ಹಾರುವ
ಪ್ರವಾಹದ ಮೇಲೆ ಏರಿಳಿಯುವ
ಕಿಟಕಿಯಿಂದ ಓಡುವ, ದಣಿಯುವ

ಆ ಅಸಂಖ್ಯ ಬಣ್ಣ ಬಣ್ಣದ
ಮೀನುಗಳನ್ನು ತೋರಿಸಬೇಕೆಂದಿದ್ದೇನೆ
ಕೊಟ್ಟಿದ್ದೇನೆ ನಾನೇ ಅವುಗಳಿಗಾಕಾರ –
ನನ್ನ ಕಣ್ಣೆವೆಗಳ ರೋಮ ರೋಮದಿಂದ.

## ಎಷ್ಟು ಚಳಿ ಇದೆ

ಮೂಲ (ಹಿಂದಿ) : ಸರ್ವೇಶ್ವರ ದಯಾಲ ಸಕ್ಸೇನಾ
ಅನು : ಮುಕುಂದ ಜೋಷಿ

ಎಷ್ಟು ಚಳಿ ಇದೆ
ಗಲ್ಲದ ಮೇಲೆ ಉರುಳಿದ ಹನಿಗಳು
ಹೆಪ್ಪಗಟ್ಟಿದವು

ಎಷ್ಟು ಚಳಿ ಇದೆ
ಶಬ್ದಗಳು ಕಂಠದಲ್ಲೇ
ಬರ್ಫವಾದವು

ಆದರೂ ನೆನಪುಗಳು
ಬೆಂಕಿಯಂತೆ ಉರಿಯುತ್ತಿವೆ
ಬರ್ಫದಲ್ಲಿ ದೀವಟಿಗೆ ಹಿಡಿದು
ಯಾರೋ ಹೊರಟಂತೆ

ಬೆಳಕಿದ್ದೂ
ಬಿಸಿಲಿರವಾಗ
ಇಂಥ ಹಿಮದ ಬಿರುಗಾಳಿಯಲ್ಲಿ
ಹುಗಿದು ಹೋಗುವ ಪಶ್ಚಾತ್ತಾಪವಿಲ್ಲ.

# ನಿನಗಾಗಿ

ಮೂಲ (ಹಿಂದಿ) : ಸರ್ವೇಶ್ವರ ದಯಾಲ ಸಕ್ಸೇನಾ
ಅನು : ಮುಕುಂದ ಜೋಷಿ

ಕಾಜಿನ ಮುಚ್ಚಿದ ಕಿಟಕಿಯ ಹಿಂದೆ
ಮೊಳಕಾಲಲ್ಲಿ ಮುಖ ಮುಚ್ಚಿ ಕುಳಿತಿರುವೆ ನೀನು
ಒಂದು ಶಬ್ದವೂ ಇಲ್ಲ ನನ್ನ-ನಿನ್ನ ನಡುವೆ
ಆದರೇನು ?
ಅದಕ್ಕೇನು ?

ನನಗೆ ಹೇಳುವುದನ್ನು ನಾನು ಹೇಳಿ ಹೋಗುವೆ
ಇಲ್ಲಿ ಇದೇ ರೀತಿ ಕಾಣದಂತೆ ನಿಂತು
ನನ್ನ ಇರುವಿಕೆಯೇ ಒಂದು ಗಂಧವಾಗಿ
ನಿನ್ನೊಳಗೆ-ಹೊರಗೆ
ಹರಡುತ್ತ ಹೋಗುವದು

ಯಾಕೆಂದರೆ
ನೀನು ಮೊಳಕಾಲಿಂದ ಮುಖ ಮೇಲೆತ್ತಿದಾಗ
ಹೊರಗೆ ನನ್ನ ಆಕೃತಿ ಇರದು
ಒಂದು ಅಸ್ಪಷ್ಟ ಸಂಜೆ
ಮತ್ತು ಕಾಜಿನ ಮೇಲೆ ಒಂದು ಹಗುರಾದ ಬಾಷ್ಪ
ನೋಡಬಹುದು ನೀನು
ಈ ಕತ್ತಲೆಯಲ್ಲಿ ಅದನ್ನು
ನಿನಗಾಗಿ ಕರಗಿ
ಬಿಟ್ಟು ಹೋಗುವೆ.

# ಎಲ್ಲವನ್ನೂ ಹೇಳಿ ಆದ ಮೇಲೆ

ಮೂಲ (ಹಿಂದಿ) : ಸರ್ವೇಶ್ವರ ದಯಾಲ ಸಕ್ಸೇನಾ
ಅನು : ಮುಕುಂದ ಜೋಷಿ

ಎಲ್ಲವನ್ನೂ ಹೇಳಿ ಆದ ಮೇಲೆ
ಉಳಿಯುತ್ತದಲ್ಲಾ ಆ ಅದು
ಕೊಡಬೇಡ ನೀನದಕ್ಕೆ ಸ್ವರ

ನನ್ನ ಪವಿತ್ರ ವಿಶ್ವಾಸಗಳ ನೆರಳದು
ನನ್ನ ಮೂಕ ಅಭ್ಯಾಸದ ನಿಧಿ
ನನ್ನ ಇಡೀ ರಚನೆಯ ಕ್ರಮ
ನನ್ನ ಬದುಕಿನ ಕೂಡಿಸಿಟ್ಟ ಶ್ರಮ
ನಾನು ಇರುವುದೇ ಅಷ್ಟು
ಅದೊಂದೇ ಆಸರೆ ನನಗೆ
ಕೊಡಬೇಡ ನೀನದಕ್ಕೆ ಸ್ವರ

ನಮ್ಮನ್ನು, ನಿನ್ನನ್ನು, ಎಲ್ಲರನ್ನೂ
ಒಂದಾಗಿಸುವ ದುಃಖವದು
ಅದುಂ ಸತ್ಯ
ಅಪರಿಚಿತರನ್ನು ಕೈ ಹಿಡಿದು ನಡೆಸುತ್ತದೆ
ಪ್ರತಿ ಗತಿಗೂ ಹೊಸ ಜನ್ಮ ಕೊಡುವ
ವಿರಾಮ ಸ್ಥಳವದುಂ
ಮರಳುಗಾಡಿನಲ್ಲಿ ನೌಕೆ ನಡೆಸುವ ಆಸ್ಥೆ
ಮುರಿದ ಮನದ ಸಾಮರ್ಥ್ಯವದುಂ
ಅಲೆದಾಡುವ ಆತ್ಮದ ಅರ್ಥವದುಂ
ಕೊಡಬೇಡ ನೀನದಕ್ಕೆ ಸ್ವರ

ಅದು ನನ್ನ ಅಥವಾ ನನ್ನೀ ಯುಗಕ್ಕೂ ದೊಡ್ಡದು
ಅದು ಬರಲಿರುವ ಮಾನವನ ಅಮಾನತ್ತು
ಅದಕ್ಕೇ
ವಿನಾಶ ಮತ್ತು ವಿಧ್ವಂಸಕ್ಕೂ ಮಿಗಿಲಾದುದು
ಹೊಸ ಸೂರ್ಯನನ್ನು ಹುಟ್ಟಿಸುವ ಅಂತರಾಳ
ಹೊಸ ಲೋಕ, ಹೊಸ ಸೃಷ್ಟಿ, ಹೊಸ
ಕನಸುಗಳನ್ನು ನೀಡುವದದು
ಅದು ನನ್ನ ಕೃತಿ
ನಾನದರ ಅನುಕೃತಿ
ಕೊಡಬೇಡ ನೀನದಕ್ಕೆ ಸ್ವರ.

## ನಮ್ಮ ಲೇಖಕರು


1. ಬಿ. ವೈ. ಲಲಿತಾಂಬ
811, 10ನೇ ಎ ಮೇನ್, ಮೊದಲ ಹಂತ, ಇಂದಿರಾನಗರ
ಬೆಂಗಳೂರು-560 038

2. ಜಿ. ಎಸ್. ಭಟ್ಟ
ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು-6

3. ಎ. ಎಂ. ದೇವಿ
ಸಂಶೋಧನಾ ಸಹಾಯಕಿ, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ
ಮೈಸೂರು-6

4. ಸುಜ್ಞಾನಮೂರ್ತಿ

5. ಸಿ. ಸುಶೀಲ
36, ಎಂಟನೇ ಮೇನ್, ಸರಸ್ವತಿಪುರಂ, ಮೈಸೂರು-570 009

6. ಎಚ್. ಎಸ್. ಪಾರ್ವತಿ
ಸ್ನೇಹ, 3368, 13ನೇ ಅಡ್ಡರಸ್ತೆ, ಕೆ. ಆರ್. ರಸ್ತೆ, ಶಾಸ್ತ್ರಿನಗರ
ಬೆಂಗಳೂರು-560 028

7. ಎಚ್. ವಿ. ರಾಮಚಂದ್ರರಾವ್
ಆಶ್ರಯ, ಕೋಟೆ, ಚಿಕ್ಕಬಳ್ಳಾಪುರ

8. ಎಮ್. ಎನ್. ವ್ಯಾಸರಾವ್
ಚೈತ್ರ, 326, 5ನೇ ಕ್ರಾಸ್. 3ನೇ ಘಟ್ಟ, 3ನೇ ಹಂತ (ಕತ್ರಿಗುಪ್ಪೆ)
ಬನಶಂಕರಿ, ಬೆಂಗಳೂರು-560 028

9. ಡಾ. ಟಿ. ಜಿ. ಪ್ರಭಾಶಂಕರ್ 'ಪ್ರೇಮಿ'
ರೀಡರ್, ಹಿಂದಿ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-56

10. ಬಿ. ಜಿ. ಕನಕೇಶಮೂರ್ತಿ
ಸಂಶೋಧಕ, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ
ಮೈಸೂರು-570 006

11. ಚಂದ್ರಕಾಂತ ಪೋಕಳೆ
ಕನ್ನಡ ಉಪನ್ಯಾಸಕ, ಬಿ.ಎಸ್.ಪ.ಪೂ. ಮಹಾವಿದ್ಯಾಲಯ
ಬೇಡಕಿಹಾಳ-591 214, ಬೆಳಗಾವಿ ಜಿಲ್ಲೆ

12. ಎಂ. ಆರ್. ಕಮಲ
405, ಉಮಾಶಂಕರ, 19ನೇ 'ಜಿ' ಮೇನ್, ಒಂದನೇ ಎನ್ ಬ್ಲಾಕ್
ರಾಜಾಜಿನಗರ, ಬೆಂಗಳೂರು-560 010

13. ಎಚ್. ಎನ್. ದ್ವಾರಕಾನಾಥ
ನಾರಾಯಣಸ್ವಾಮಿ ಅಯ್ಯಂಗಾರ್ ರಸ್ತೆ, ಶೇಷಾದ್ರಿಪುರಂ
ಬೆಂಗಳೂರು-560 020

14. ಸಿ. ಎನ್. ರಾಮಚಂದ್ರನ್
ಮಂಗಳಗಂಗೋತ್ರಿ, ಕೊಣಾಜೆ, ಮಂಗಳೂರು

15. ಬಿ. ಎ. ಸನದಿ
456, Sector III, C. G, Colony, Bombay-400 037

16. ಬಸಂತಿದೇವಿ
ಭಾಷಾವಿಜ್ಞಾನದ ಉಪನ್ಯಾಸಕಿ, ಎ.ಪಿ.ಐ.ಎಸ್.ಎಚ್, ಮೈಸೂರು-570006

17. ಎನ್. ಎಸ್. ರಘುನಾಥ್
ರೀಡರ್ ಇನ್ ಇಂಗ್ಲಿಷ್, ರೀಜನಲ್ ಕಾಲೇಜ್ ಆಫ್ ಎಜ್ಯುಕೇಷನ್
ಮೈಸೂರು-570 006

18. ಶ್ರೀನಿವಾಸ್ ವಿ. ಸುತ್ರಾವೆ
658/ಬಿ, ಬಸವೇಶ್ವರ ಕೃಪ, ಕೆ. ಆರ್. ಪುರಂ, ಹಾಸನ-570 201

19. ಕೆ. ಆರ್. ನಾರಾಯಣಶೆಟ್ಟಿ
ನಂ. 7, 6ನೇ ಮೇನ್, ಪರಮಹಂಸ ರಸ್ತೆ, ಯಾದವಗಿರಿ, ಮೈಸೂರು

20. ಮುಕುಂದ ಜೋಷಿ
A-6, Sejal Apartment, Devidayal Road, Mulund (W)
Bombay-400 080

FORM IV

## ANIKETHANA

Statement about ownership and other particulars about newspaper 'ANIKETHANA' Bangalore as required to be Published under Section 19–D (b) of the Press and Registration of Newspapers (Central) Rules 1956.

1. *Place of Publication :* Bangalore.

2. *Periodicity of its publication* : Quarter yearly.

3. *Printer* : Rashmi Mudrana, Sudhamanagar Bangalore-560027

4. *Publisher* : Dr. G. S. Sivarudrappa, President Karnataka Sahithya Academy, Citizen of India, No. 14/3-A, Nrupatunga Road, Bangalore–560 002.

5. *Editor* : Dr. G.S.Sivarudrappa, President, Karnataka Sahithya Academy, Citizen of India, No. 14/3-A, Nrupatunga Road, Bangalore-560 002.

6. Names and Address of the individuals who own the Newspaper and Partners or Shareholders holding more than one percent of the total capital :
Registrar, Karnataka Sahithya Academy, No. 14/3–A, Nrupatunga Road, Bangalore-560 002.

I, Dr. G. S. Sivarudrappa hereby declare that the particulars given above are true to the best of my knowledge and belief'.

Sd/-
*(Dr. G. S. Sivarudrappa)*
Publisher

Date . 15-2-1990

ಸಂ. 3-1
ಏಪ್ರಿಲ್ 1990-ಜೂನ್ 1990

# ಅನಿಕೇತನ

ಇದು ಕನ್ನಡೇತರ ಸಾಹಿತ್ಯ ಪರಿಚಯಕ್ಕೆ
ಮೀಸಲಾದ ತ್ರೈಮಾಸಿಕ

ಸಂಪಾದಕರು :
ಬಿ. ವೈ. ಲಲಿತಾಂಬ
ಡಾ. ಆರ್ಬ್ಯುಸ್. ಸುಂದರಂ
ಡಾ. ಎಚ್. ಎಸ್. ವೆಂಕಟೇಶ ಮೂರ್ತಿ

---

ಸಂಜೀವ್‌ದೇವ್ * ರಾಳ್ಳಪಲ್ಲಿ * ಶೇಷೇಂದ್ರ ಶರ್ಮ * ಪ್ರೇಮ್ ಚಂದ್
ರಸೆಲ್ * ಖಲೀಲ್ ಜಿಬ್ರಾನ್ * ಬೋರಿಸ್ ಪಾಸ್ತರ್‌ನಾರ್ * ರಣವೀರ ರಾಂಗ್ರ
ಇಳಾಚಂದ್ರ ಜೋಶಿ * ಆಲ್ಬರ್ಟ್ ಕಾಮೂ * ಬೈರನ್ * ನೇಮಿಚಂದ್ರ ಜೈನ್
ಕೇಶವ ಮೇಶ್ರಾಮ * ಅಶೋಕ ಬಾಗವೆ * ರಜನಿ ಪರೂಳೆಕರ * ಅನಿಲ ದ್ರವಿಡ
ಗುರುನಾಥ ಸಾಮಂತ * ಧಾಮಣಸ್ಕರ್ * ಜಯಶಂಕರ ಪ್ರಸಾದ್ * ಶಿರವಾಡಕರ
ಅನಿಸ್ ಉಜ ಜಮಾನ್ * ಬ್ರೆಕ್ಟ್ * ಗಾರ್ಕಿ * ಸಕ್ಸೇನಾ

---

ಚಂದಾ ಹಣವನ್ನು ಡಿ. ಕೆ. ಶ್ಯಾಮಸುಂದರರಾವ್, ರಿಜಿಸ್ಟ್ರಾರ್, ಸಾಹಿತ್ಯ ಅಕಾಡೆಮಿ
ನಂ. 14/3-ಎ, ನೃಪತುಂಗ ರಸ್ತೆ, ಬೆಂಗಳೂರು-560 002 ಇವರಿಗೆ ಕಳಿಸಬೇಕು.